# ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ಸಂರಕ್ಷಣಾ ಕಾಯ್ದೆ -೨೦೦೫: ಕಾರ್ಯಗತಗೊಳಿಸುವಿಕೆಯಲ್ಲಿ ಮಹಿಳೆಯರ ಅರಿವಿನ ಪಾತ್ರ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ)


ಸಂಶೋಧಕರು

ಪಂಪಾಪತಿ ಎನ್.ಎಲ್.

ಮಾರ್ಗದರ್ಶಕರು

ಡಾ. ಶೈಲಜ ಇಂ. ಹಿರೇಮಠ

ಸಹ ಪ್ರಾಧ್ಯಾಪಕರು

ಮಹಿಳಾ ಅಧ್ಯಯನ ವಿಭಾಗ







ಮಹಿಳಾ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೦

# ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ಸಂರಕ್ಷಣಾ ಕಾಯ್ದೆ-೨೦೦೫: ಕಾರ್ಯಗತಗೊಳಿಸುವಿಕೆಯಲ್ಲಿ ಮಹಿಳೆಯರ ಅರಿವಿನ ಪಾತ್ರ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ)

ಸಂಶೋಧಕರು
ಪಂಪಾಪತಿ ಎನ್.ಎಲ್.

ಮಾರ್ಗದರ್ಶಕರು
ಡಾ.ಶೈಲಜ ಇಂ. ಹಿರೇಮಠ
ಸಹ ಪ್ರಾಧ್ಯಾಪಕರು
ಮಹಿಳಾ ಅಧ್ಯಯನ ವಿಭಾಗ



ಮಹಿಳಾ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೦



## ಸಂಶೋಧಕರ ಪ್ರಮಾಣ ಪತ್ರ

ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ಸಂರಕ್ಷಣಾ ಕಾಯ್ದೆ-೨೦೦೫: ಕಾರ್ಯಗತಗೊಳಿಸುವಿಕೆಯಲ್ಲಿ ಮಹಿಳೆಯರ ಅರಿವಿನ ಪಾತ್ರ ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ.ಶೈಲಜಾ ಇಂ.ಹಿರೇಮಠ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಸಂಶೋಧನ ಸಂಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಅಥವಾ ಇತರೆ ಯಾವುದೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸಂಶೋಧಕರು

ಪಂಪಾಪತಿ ಎನ್.ಎಲ್.
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

ಸ್ಥಳ: ವಿದ್ಯಾರಣ್ಯ

ದಿನಾಂಕ: 14-9.2010.

## ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀ ಪಂಪಾಪತಿ ಎನ್.ಎಲ್. ಅವರು ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ಸಂರಕ್ಷಣಾ ಕಾಯ್ದೆ-೨೦೦೫: ಕಾರ್ಯಗತಗೊಳಿಸುವಿಕೆಯಲ್ಲಿ ಮಹಿಳೆಯರ ಅರಿವಿನ ಪಾತ್ರ ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಲೆಂದು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಈ ಸಂಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇತರ ಉದ್ದೇಶಗಳಿಗಾಗಲಿ ಇವರು ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದಶಕರು

ಡಾ.ಶೈಲಜ ಇಂ.ಹಿರೇಮಠ
ಸಹ ಪ್ರಾಧ್ಯಾಪಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

ಸ್ಥಳ: ವಿದ್ಯಾರಣ್ಯ
ದಿನಾಂಕ: 14-9-2010.

# ಪರಿವಿಡಿ

# ಅಧ್ಯಾಯ - ೧. ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವೈಧಾನಿಕತೆ

## ಅಧ್ಯಾಯ ೧

# ಪ್ರಸ್ತಾವನೆ

ಸಮಾಜ ವ್ಯವಸ್ಥೆಯಲ್ಲಿನ ಪ್ರತಿಯೊಂದು ರಂಗದಲ್ಲಿಯೂ ಪುರುಷನಿಗೆ ಇರುವಷ್ಟು ಸ್ಥಾನಮಾನಗಳು ಮಹಿಳೆಗೆ ಇರಬೇಕಾದುದು ಸಹಜ. ಆದರೆ ಶ್ರೇಣೀಕೃತ, ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯರ ಸ್ಥಾನಮಾನಗಳನ್ನು ಪುರುಷ ಪ್ರಧಾನ ವ್ಯವಸ್ಥೆಯು ತನ್ನ ಇಚ್ಛೆಯಂತೆ ಬಳಸಿಕೊಂಡಿದೆ. ಸಮಾಜದಲ್ಲಿ ಮಹಿಳಾ ಶೋಷಣೆ ಎಂಬುದು ಚಾರಿತ್ರಿಕವಾಗಿ ಬೆಳೆದುಬಂದುದಾಗಿದೆ. ಆರ್ಥಿಕತೆ ಮತ್ತು ಅಧಿಕಾರದ ಬಲಗಳು ಪುರುಷರ ವಶದಲ್ಲಿ ಇರುವಂತಹ ಎಲ್ಲಾ ಕ್ಷೇತ್ರದಲ್ಲಿಯೂ ಹೆಣ್ಣನ್ನು ಪುರುಷರ ಆಸ್ತಿಯಂತೆ ಭಾವಿಸಲಾಗಿದೆ ಮತ್ತು ಬಳಸಿಕೊಳ್ಳಲಾಗುತ್ತಿದೆ.

ವರದಕ್ಷಿಣೆ ಕಿರುಕುಳಕ್ಕೆ ಒಳಗಾಗುತ್ತಿರುವವರು, ಕೌಟುಂಬಿಕ ದೌರ್ಜನ್ಯಕ್ಕೆ ಒಳಗಾಗುತ್ತಿರುವವರು ಹೀಗೆ ಹಲವಾರು ಕಿರುಕುಳಗಳಿಗೆ, ಶೋಷಣೆಗಳಿಗೆ ಬಲಿಯಾಗುತ್ತಿರುವ ಹೆಣ್ಣುಮಕ್ಕಳ ಸಂಖ್ಯೆ ದೃತಿಗೆಡಿಸುವಷ್ಟು ಹೆಚ್ಚಾಗುತ್ತಿದೆ. ಪುರುಷರು ಮಹಿಳೆಯನ್ನು ತಮಗೆ ಸರಿಸಮಾನ ವ್ಯಕ್ತಿಯೆಂದು ಪರಿಭಾವಿಸದೇ ಆಕೆಯನ್ನು ಕುಟುಂಬದೊಳಗೆ ಮತ್ತು ಕುಟುಂಬದ ಹೊರಗೆ ಹಲವಾರು ರೀತಿಯಲ್ಲಿ ಶೋಷಿಸುತ್ತಿದ್ದಾರೆ. ಮುಖ್ಯವಾಗಿ ಕುಟುಂಬದ ಒಳಗೆ ಹಲವಾರು ರೀತಿಯ ಕಟ್ಟುಪಾಡುಗಳನ್ನು ಮಹಿಳೆಗೆ ಹೇರಲಾಗಿದೆ. ಅವುಗಳನ್ನು ಮೀರಿದರೆ ಮಹಿಳೆಯ ಜೀವನ ಡೋಲಾಯಮಾನವಾಗಿ ಕುಟುಂಬದಿಂದ ನಿರಾಕರಿಸಲ್ಪಡಬೇಕಾಗುತ್ತದೆ. ಹಾಗಾಗಿ ಮಹಿಳೆ ಪುರುಷ ಪ್ರಧಾನ ವ್ಯವಸ್ಥೆಗೆ ತಕ್ಕಂತೆ ತನ್ನ ಜೀವನವನ್ನು ರೂಢಿಸಿಕೊಂಡು ಬಂದಿರುವುದು ಶತಶತಮಾನಗಳಿಂದಲೂ ಕಂಡುಬರುತ್ತದೆ.

ಕುಟುಂಬದಲ್ಲಿನ ಸಾಮಾಜೀಕರಣದ ಹಂತದಿಂದಲೇ ಮಹಿಳೆಯರ ಶೋಷಣೆ ಆರಂಭವಾಗುತ್ತದೆ. ಮಗು ಹುಟ್ಟಿದ ತಕ್ಷಣ ಅದು ಹೆಣ್ಣೊ ಗಂಡೊ ಎಂದು ತಿಳಿದುಕೊಂಡು ಶೋಷಣೆಯ ನಿಯಮಗಳು ಆರಂಭವಾಗುತ್ತವೆ. ಪ್ರಸಿದ್ಧ ಸ್ತ್ರೀವಾದಿ ಚಿಂತಕಿಯಾದ ಸೀಮೋನ್ ದಿ ಬೋವಾ ಹೆಣ್ಣು ಹೆಣ್ಣಾಗಿ ಜನಿಸುವುದಿಲ್ಲ. ಹೆಣ್ಣನ್ನಾಗಿ ಮಾರ್ಪಡಿಸಲಾಗುತ್ತದೆ ಎಂದು ಹೇಳುತ್ತಾರೆ. ಏಕೆಂದರೆ ಹೆಣ್ಣು ಮಗು

ಜನಿಸಿತು ಎಂದರೆ ಹಲವಾರು ಕಟ್ಟುಪಾಡುಗಳ ಮಧ್ಯೆ ಬೆಳೆಸಲಾಗುತ್ತದೆ. ಆದರೆ ಗಂಡು ಮಗು ಜನಿಸಿತು ಎಂದರೆ ಯಾವುದೇ ಕಟ್ಟುಪಾಡುಗಳಿಲ್ಲದೇ ಸ್ವತಂತ್ರವಾಗಿ ಜೀವಿಸುವಂತೆ ಬೆಳೆಸಲಾಗುತ್ತದೆ. ಇಲ್ಲಿ ಮುಖ್ಯವಾಗಿ ಮಗು ಜನಿಸಿತು ಎಂದರೆ ದ್ವಿಲಿಂಗಿ ಗುಣಗಳನ್ನು ಹೊಂದಿರುತ್ತದೆ. ಅಂದರೆ ಹೆಣ್ಣು ಮಗುವಿನಲ್ಲಿ ಹೆಣ್ಣು ಮತ್ತು ಗಂಡು ಗುಣಗಳೆರಡೂ ಇರುತ್ತವೆ. ಹಾಗೆಯೇ ಗಂಡು ಮಗು ವಿನಲ್ಲಿಯೂ ಸಹ ಹೆಣ್ಣು ಗುಣಗಳೂ ಮತ್ತು ಗಂಡು ಗುಣಗಳೂ ಇರುತ್ತವೆ. ಆದರೆ ಪುರುಷ ಪ್ರಧಾನ ವ್ಯವಸ್ಥೆ ಸಾಮಾಜೀಕರಣದ ಹಂತದಲ್ಲಿ ಒಂದು ವ್ಯವಸ್ಥಿತವಾದ ರಾಜಕಾರಣವನ್ನು ನಡೆಸಿ ಹೆಣ್ಣು ಮಗುವಿಗೆ ಹೆಣ್ಣು ಗುಣಗಳನ್ನು ಮಾತ್ರ ಮತ್ತು ಗಂಡು ಮಗುವಿಗೆ ಗಂಡು ಗುಣಗಳು ಮಾತ್ರ ಮತ್ತು ಗಂಡ ಮಗುವಿಗೆ ಗಂಡು ಗುಣಗಳು ಮಾತ್ರ ಜಾಗೃತವಾಗುವಂತೆ ನೋಡಿಕೊಳ್ಳುತ್ತದೆ. ಇಲ್ಲಿಂದ ಆರಂಭವಾದಂತಹ ತಾರತಮ್ಯ ಮುಂದೆ ಸಾಯುವವರೆಗೂ ಮಹಿಳೆಯನ್ನು ಕಾಡುತ್ತಲೇ ಇರುತ್ತದೆ. ಕುಟುಂಬದಲ್ಲಿ ಮಹಿಳೆ ಕೆಲವು ಸ್ಥಿರಮಾದರಿ ಪಾತ್ರಗಳನ್ನು ನಿಭಾಯಿಸುತ್ತಾ ತನ್ನ ಜೀವಿತದ ಕಾಲಾವಧಿಯನ್ನು ಪೂರ್ಣಗೊಳಿಸಬೇಕಾಗುತ್ತದೆ. ಇಲ್ಲವಾದರೆ ಕುಟುಂಬದಿಂದ ಮತ್ತು ಸಮಾಜದಿಂದ ದೂಷಿಸಲ್ಪಡುತ್ತಾಳೆ. ಇಲ್ಲಿ ಸ್ಥಿರಮಾದರಿ ಪಾತ್ರಗಳು ಎಂಬುದೂ ಸಹ ಪುರುಷಪ್ರಧಾನ ಮೌಲ್ಯಗಳಾಗಿರು ವುದರಿಂದ ಈ ಪಾತ್ರಗಳಿಗೆ ಅನುಗುಣವಾಗಿ ನಡೆಯಬೇಕೆಂಬುದೂ ಸಹ ಶೋಷಣೆಯಾಗಿದೆ ಹೀಗೆ. ಕುಟುಂಬವು ಮಹಿಳೆಗೆ ಒಂದು ನರಕ ಸದೃಶ್ಯವಾದ ವಾತಾವರಣವನ್ನು ಸೃಷ್ಟಿಮಾಡುತ್ತದೆ. ಇಂತಹ ವಾತಾವರಣದಲ್ಲಿ ಸಹಜವಾಗಿಯೇ ಹಲವಾರು ಶೋಷಣೆಗಳಿಗೆ ಬಲಿಯಾಗುತ್ತಿರುವುದು ಕಂಡುಬರುತ್ತದೆ. ಸ್ಥಿರಮಾದರಿ ಪಾತ್ರಗಳಲ್ಲಿ ಹೆಂಡತಿಯ ಪಾತ್ರವೂ ಒಂದಾಗಿದ್ದು ಈ ಸಂದರ್ಭದಲ್ಲಿ ಗಂಡನಿಂದ, ಅತ್ತೆ, ಮಾವಂದಿರು, ನಾದಿನಿಯರು ಹೀಗೆ ಗಂಡನ ಮನೆಯಲ್ಲಿನ ಸದಸ್ಯರುಗಳಿಂದ ಅನೇಕ ಶೋಷಣೆಗಳಿಗೆ ಒಳಗಾಗುತ್ತಿದ್ದಾಳೆ. ಆಧುನೀಕರಣದ ಇಂದಿನ ಸಂದರ್ಭದಲ್ಲಿಯೂ ಸಹ ಮಹಿಳೆಯರ ಮೇಲಿನ ಶೋಷಣೆ ಎಂಬುದು ಬೇರೆ ಬೇರೆ ಸ್ವರೂಪವನ್ನು ಪಡೆದುಕೊಂಡಿದೆ. ಸಂವಿಧಾನವು ಮಹಿಳೆಯರ ಹಿತವನ್ನು ಕಾಪಾಡಲು ಅನೇಕ ರೀತಿಯ ಕಾನೂನುಗಳನ್ನು ರೂಪಿಸಿದ್ದರೂ ಸಹ ಅವುಗಳು ಯಾವುವೂ ಕೂಡ ಕಡ್ಡಾಯವಾಗಿ ಜಾರಿಗೊಳ್ಳುತ್ತಿಲ್ಲ ಮತ್ತು ಪಾಲಿತವಾಗುತ್ತಿಲ್ಲ. ಹಾಗಾಗಿ ಮಹಿಳೆಯು ಶೋಷಣೆಗಳಿಂದ ಮುಕ್ತಳಾಗಿಲ್ಲ. ಕುಟುಂಬವನ್ನು ಖಾಸಗಿ ಎಂದು ಪರಿಗಣಿಸುತ್ತಾ ಬಂದಿರುವುದರಿಂದ ಕುಟುಂಬದೊಳಗೆ ಶೋಷಣೆ ನಡೆಯುತ್ತದೆ ಎಂಬುದು ಯಾರ ಗಮನಕ್ಕೂ ಬಂದಿರಲಿಲ್ಲ. ವರದಕ್ಷಿಣೆ ತಡೆ ಕಾಯ್ದೆಯು ಕುಟುಂಬದೊಳಗಿನ ದೌರ್ಜನ್ಯದ ಮುಖಗಳನ್ನು ಅನಾವರಣಗೊಳಿಸಿತು. ಈ ಹಿನ್ನೆಲೆಯಲ್ಲಿ ಕೌಟುಂಬಿಕ ದೌರ್ಜನ್ಯದ ಕುರಿತು ಗಮನ ಹರಿಸಿ ಅದು ಕಾಯ್ದೆಯಾಗಿ ರೂಪಗೊಳ್ಳುವ ನಿಟ್ಟಿನಲ್ಲಿ ಮಹಿಳಾ ಚಳುವಳಿಗಳು ಪ್ರಯತ್ನಿಸಿದವು. ಅದರ ಫಲವಾಗಿಯೇ ಕೌಟುಂಬಿಕ ಹಿಂಸೆ ತಡೆಕಾಯ್ದೆಯ ಅನುಷ್ಠಾನಗೊಂಡಿದೆ.

## ೧.೧. ಅಧ್ಯಯನದ ಉದ್ದೇಶ

"ಕೌಟುಂಬಿಕ ಹಿಂಸೆ ತಡೆ ಕಾಯಿದೆ-೨೦೦೫: ಕಾರ್ಯಗತಗೊಳಿಸುವಿಕೆಯಲ್ಲಿ ಮಹಿಳೆಯರ ಅರಿವಿನ ಪಾತ್ರ" ಪ್ರಸ್ತುತ ಅಧ್ಯಯನದ ವಿಷಯವಾಗಿದ್ದು, ಇಂದು ಕಾಯಿದೆಯ ಬಗ್ಗೆ ಮಹಿಳೆಯರಲ್ಲಿ ಯಾವುದೇ ರೀತಿಯ ಅರಿವು ಇಲ್ಲವಾಗಿದೆ. ಸುಶಿಕ್ಷಿತರಿಂದ ಹಿಡಿದು ಅನಕ್ಷರಸ್ಥ ಮಹಿಳೆಯರವರೆಗೂ ಸಹ ಇಂದು ಕುಟುಂಬದಲ್ಲಿ ತಮಗೆ ಗೊತ್ತಿದ್ದೊ ಗೊತ್ತಿಲ್ಲದೆಯೋ ಹಲವಾರು ರೀತಿಯಲ್ಲಿ ಅಂದರೆ ನೇರವಾಗಿ ಮತ್ತು ಪರೋಕ್ಷವಾಗಿ ಹಿಂಸೆಯನ್ನು ಅನುಭವಿಸುತ್ತಲೇ ಇದ್ದಾರೆ. ಈ ಕುಟುಂಬದಲ್ಲಿನ ಹಿಂಸೆಯನ್ನು ತಡೆಯುವುದಕ್ಕೋಸ್ಕರ ಒಂದು ಕಾನೂನನ್ನು ಜಾರಿಗೆ ತಂದಿದ್ದರೂ ಸಹ ಅದರ ಬಗ್ಗೆ ಮಹಿಳೆಯರಲ್ಲಿ ಅರಿವು ಇಲ್ಲದಂತಾಗಿದೆ. ಹಾಗಾಗಿ ಈ ಕಾಯಿದೆಯ ಬಗ್ಗೆ ಅರಿವನ್ನು ಮೂಡಿಸುವುದರ ಹಿನ್ನೆಲೆಯಲ್ಲಿ ಅಧ್ಯಯನವು ಕೆಲವು ಉದ್ದೇಶಗಳನ್ನು ಹೊಂದಿದೆ.

* ಕುಟುಂಬದಲ್ಲಿ ಪುರುಷ ರಾಜಕಾರಣ ಹೇಗಿದೆ ಮತ್ತು ಮಹಿಳೆ ಯಾವ ಯಾವ ವಿಧದಲ್ಲಿ ಶೋಷಣೆಗಳೀದ ಬಳಲುತ್ತಿದ್ದಾಳೆ ಎಂಬುದನ್ನು ಮೊದಲು ಅರಿಯುವುದು.
* ಆಧುನಿಕತೆಯ ಇಂದಿನ ಸಂದರ್ಭದಲ್ಲಿ ಮಹಿಳೆಯ ಮೇಲಿನ ಶೋಷಣೆಯ ಸ್ವರೂಪಗಳನ್ನು ತಿಳಿಯುವುದು.
* ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ಸಂರಕ್ಷಣಾ ಅಧಿನಿಯಮದ ಬಗ್ಗೆ ಮಹಿಳೆಯರಲ್ಲಿ ಅರಿವನ್ನು ಮೂಡಿಸುವುದು.
* ಈ ನಿಯಮದ ನಿರ್ವಹಣಾಗಾರರು ಯಾರು? ಮತ್ತು ಅವರು ಸಮರ್ಥವಾಗಿ ಕಾರ್ಯ ನಿರ್ವಹಿಸಲು ಯಾವ ಕ್ರಮಗಳನ್ನು ಕೈಗೊಳ್ಳಬೇಕು ಎಂಬುದನ್ನು ತಿಳಿಸುವುದು.
* ಮಹಿಳೆಯರಿಗೆ ಯಾವ ಯಾವ ವಿಧಾನಗಳ ಮೂಲಕ ಮಹಿಳಾ ಕಾನೂನಿನ ಕುರಿತು ಅರಿವನ್ನು ಮೂಡಿಸಬೇಕಾಗುತ್ತದೆ ಎಂಬುದನ್ನು ತಿಳಿಸುವುದು.
* ಕುಟುಂಬದಲ್ಲಿನ ಲಿಂಗ ತಾರತಮ್ಯವನ್ನು ಹೋಗಲಾಡಿಸುವುದರ ಮೂಲಕ ಸಮಾನತೆಯನ್ನು ಸಾಧಿಸುವುದರ ನಿಟ್ಟಿನಲ್ಲಿ ಪ್ರಯತ್ನಿಸುವುದು.
* ಈ ಕಾಯಿದೆಯು ಸಮರ್ಥವಾಗಿ ಜಾರಿಯಾಗಬೇಕಾದರೆ ಮಹಿಳೆಯರ ಪಾತ್ರ ಎಷ್ಟಿದೆ ಎಂಬುದನ್ನು ತಿಳಿಸುವುದರ ಮೂಲಕ ಜಾಗೃತಿಯನ್ನು ಮೂಡಿಸುವುದು.

### ೧.೨. ಅಧ್ಯಯನದ ವ್ಯಾಪ್ತಿ

ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ಸಂರಕ್ಷಣಾ ಕಾಯಿದೆಯು ೨೦೦೫ರಲ್ಲಿ ಜಾರಿಗೊಂಡಿದ್ದರೂ ಸಹ ಇಂದಿಗೂ ಇದರ ಅರಿವು ಜನರಿಗೆ ಇಲ್ಲದಿರುವುದು ಒಂದು ಶೋಚನೀಯ ಸಂಗತಿ. ನಗರ ಪ್ರದೇಶಗಳಲ್ಲಿ ಶಿಕ್ಷಣವನ್ನು ಪಡೆದಿರುವಂತಹ ಕುಟುಂಬಗಳಲ್ಲಿ ಈ ಕಾಯಿದೆಯ ಬಗ್ಗೆ ಸ್ವಲ್ಪಮಟ್ಟಿಗೆ ಅರಿವು ಇರುತ್ತದೆ. ಆದರೆ ಮಹಿಳೆ ಸುಶಿಕ್ಷಿತಳಾಗಿ ಈ ಕಾಯಿದೆಯ ಬಗ್ಗೆ ತಿಳುವಳಿಕೆಯನ್ನು ಹೊಂದಿದ್ದರೂ ಸಹ ಅವಳು ಕುಟುಂಬದ ಹಿಂಸೆಯಿಂದ ಪಾರಾಗಿದ್ದಾಳೆ ಎಂದುಕೊಂಡರೆ ಅದು ತಪ್ಪು. ಏಕೆಂದರೆ ಇಲ್ಲಿ ಮುಖ್ಯವಾಗಿ ಕುಟುಂಬದಲ್ಲಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಒಂದಲ್ಲಾ ಒಂದು ರೀತಿಯಲ್ಲಿ ಮಹಿಳೆ ಹಿಂಸೆಯನ್ನು ಅನುಭವಿಸುತ್ತಿದ್ದಾಳೆ. ಆದರೆ ಗ್ರಾಮೀಣ ಪ್ರದೇಶದ ಮಹಿಳೆಯರಿಗೆ ಹೋಲಿಸಿದರೆ ನಗರ ಪ್ರದೇಶದ ಮಹಿಳೆಯರ ಸ್ಥಿತಿ ಸ್ವಲ್ಪ ಉತ್ತಮವಾಗಿರುತ್ತದೆ. ಗ್ರಾಮೀಣ, ಪಟ್ಟಣ ಪ್ರದೇಶಗಳಲ್ಲಿನ ಬಹಳಷ್ಟು ಮಹಿಳೆಯರು ಅನಕ್ಷರಸ್ಥರಾಗಿದ್ದು ಅವರು ಸಂವಿಧಾನದ ಕಾನೂನುಗಳ ಬಗ್ಗೆ ಯೋಚಿಸದೇ ತಮ್ಮ ದಿನನಿತ್ಯದ ಬದುಕಿನಲ್ಲಿ ನಿರತರಾಗಿರುತ್ತಾರೆ. ಕುಟುಂಬದಲ್ಲಿ ಎಷ್ಟೇ ಹಿಂಸೆಯನ್ನು ಅನುಭವಿಸುತ್ತಿದ್ದರೂ ಸಹ ಅದು ನಮ್ಮ ಹಣೆಬರಹ ಎಂದು ಹೇಳಿಕೊಂಡು ಹಿಂಸೆಯನ್ನು ಸಹಿಸಿಕೊಳ್ಳುತ್ತಿದ್ದಾರೆ. ಕೆಲವು ಸಂದರ್ಭದಲ್ಲಿ ಹಿಂಸೆಯನ್ನು ತಾಳಲಾರದೆ ಆತ್ಮಹತ್ಯೆಗೂ ಬಲಿಯಾಗಿಬಿಡುತ್ತಾರೆ. ಈ ನಿಟ್ಟಿನಲ್ಲಿ ಅಧ್ಯಯನದ ವ್ಯಾಪ್ತಿಯನ್ನು ಕನ್ನಡ ವಿಶ್ವವಿದ್ಯಾಲಯದ ಪಕ್ಕದಲ್ಲಿಯೇ ಇರುವಂತಹ ಕಮಲಾಪುರ ಪಟ್ಟಣಕ್ಕೆ ಮಾತ್ರ ಸೀಮಿತವಾಗಿರಿಸಿದೆ. ಕಮಲಾಪುರದಲ್ಲಿ ಮಹಿಳೆಯರು ಯಾವ ಯಾವ ವಿಧಾನಗಳಲ್ಲಿ ಶೋಷಣೆಯನ್ನು ಹಿಂಸೆಯನ್ನು ಅನುಭವಿಸುತ್ತಿದ್ದಾರೆ ಎಂಬುದನ್ನು ಅರಿತುಕೊಂಡು ಈ ಹಿಂಸೆಯಿಂದ ಮಹಿಳೆಯನ್ನು ಮುಕ್ತಳನ್ನಾಗಿಸಿ ಒಂದು ಸುಖೀ ಕುಟುಂಬವನ್ನು ನಿರ್ಮಿಸುವುದಾಗಿದೆ. ಈ ನಿಟ್ಟಿನಲ್ಲಿ ಅಧ್ಯಯನದ ವ್ಯಾಪ್ತಿಯನ್ನು ಬಳ್ಳಾರಿ ಜಿಲ್ಲೆಯ, ಹೊಸಪೇಟೆ ತಾಲೂಕಿನ ಕಮಲಾಪುರ ಪಟ್ಟಣಕ್ಕೆ ಸೀಮಿತಗೊಳಿಸಲಾಗಿದೆ.

### ೧.೩. ಅಧ್ಯಯನದ ವೈಧಾನಿಕತೆ

ಪ್ರಸ್ತುತ ಅಧ್ಯಯನವು ಕೌಟುಂಬಿಕ ಹಿಂಸೆ ತಡೆ ಕಾಯ್ದೆಯ ಬಗ್ಗೆ ಮಹಿಳೆಯರಲ್ಲಿ ಅರಿವನ್ನು ಮೂಡಿಸುವುದಾದ್ದರಿಂದ ಹೆಚ್ಚಾಗಿ ಕ್ಷೇತ್ರಕಾರ್ಯದ ಮಾಹಿತಿಯನ್ನು ಪ್ರಥಮ ಆಕರವಾಗಿ ಬಳಸಿಕೊಳ್ಳಲಾಗಿದೆ. ಈ ಸಂದರ್ಭದಲ್ಲಿ ಪ್ರಕರಣಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಗುಣಾತ್ಮಕ ಸಂಶೋಧನಾ ವಿಧಾನದ ಮೂಲಕ ವ್ಯಕ್ತಿ ನಿಷ್ಪತೆಯನ್ನು ಕಾಯ್ದುಕೊಳ್ಳಲಾಗಿದೆ. ಇದರಲ್ಲಿ ಅವಲೋಕನ, ಸಂದರ್ಶನ, ರಚಿತ ಮತ್ತು ಅರಚಿತ ಪ್ರಶ್ನಾವಳಿಗಳನ್ನು ಅಳವಡಿಸಿಕೊಳ್ಳಲಾಗಿದೆ. ಹಾಗೂ ಆಕರ ಗ್ರಂಥಗಳು, ಮಾಸಪತ್ರಿಕೆಗಳು, ದಿನಪತ್ರಿಕೆಗಳು ಪೂರಕ ಮಾಹಿತಿಗಾಗಿ ಬಳಸಿಕೊಂಡು ಅಧ್ಯಯನದ ವಸ್ತುವನ್ನು ನೈಜ ರೀತಿಯಲ್ಲಿ ವಿವರಿಸಲು ಪ್ರಯತ್ನಿಸಲಾಗಿದೆ.

## ಅಧ್ಯಾಯ ೨

# ಕುಟುಂಬ ಹಿಂಸೆ : ಮಹಿಳೆ

ಜಗತ್ತಿನ ಇತರ ದೇಶಗಳ ಮಹಿಳೆಯರ ಸ್ಥಾನಮಾನಗಳಿಗಿಂತ ಭಾರತೀಯ ಮಹಿಳೆಯರ ಸ್ಥಾಮಾನಗಳು ತುಂಬಾ ಭಿನ್ನವಾಗಿರುವುದು ಕಂಡುಬರುತ್ತದೆ. "ಮಾತೃ ದೇವೋ ಭವ" ಎಂದು ಹೇಳಲಾಗಿದೆ. ಹೀಗೆ ಹೇಳುವುದರ ಮೂಲಕ ಮಹಿಳೆಯನ್ನು ಆರಾಧನೆಯ ನೆಲೆಯಲ್ಲಿ ಕಾಣಲಾಗುತ್ತಿದೆಯಾದರೂ ಇದು ಕೇವಲ ತೋರಿಕೆಗೆ ಮಾತ್ರ. ಏಕೆಂದರೆ ಮಾತೃ ಸ್ಥಾನಕ್ಕೆ ಏರಿಸಿದ ಅದೇ ಮಹಿಳೆಯನ್ನು ಎಂದಿನಿಂದಲೂ ನಾನಾ ವಿಧದಲ್ಲಿ ಶೋಷಿಸಲಾಗುತ್ತಿದೆ, ಹಲವಾರು ರೀತಿಯಲ್ಲಿ ಹಿಂಸಿಸಲಾಗುತ್ತಿದೆ. ಸಮಾಜದ ಅತ್ಯಂತ ಚಿಕ್ಕ ಘಟಕವಾದ ಕುಟುಂಬದಿಂದ ಹಿಡಿದು ವ್ಯವಸ್ಥೆಯ ಎಲ್ಲಾ ರಂಗಗಳಲ್ಲಿಯೂ ಮಹಿಳೆಯನ್ನು ಒಂದಲ್ಲಾ ಒಂದು ಕಾರಣದಿಂದ ಹಿಂಸಿಸಲಾಗುತ್ತಿದೆ. ಇದಕ್ಕೆಲ್ಲಾ ಕಾರಣ ಪುರುಷಶಾಹಿ ವ್ಯವಸ್ಥೆ. ಮತ್ತು ಮಹಿಳೆ ಎರಡನೇ ದರ್ಜೆಯ ಸ್ಥಾನಕ್ಕೆ ತಳ್ಳಲ್ಪಟ್ಟಿರುವುದು. ಮುಖ್ಯವಾಗಿ ಕುಟುಂಬದಿಂದಲೇ ಮಹಿಳೆಯರಿಗೆ ಎಲ್ಲಾ ಬಗೆಯ ಸಮಸ್ಯೆಗಳು ಆರಂಭವಾಗುತ್ತವೆ. ಎಂದು ಹೇಳಬಹುದು. ಏಕೆಂದರೆ ಕುಟುಂಬವು ಮಹಿಳೆಗೆ ಒಂದು ಮಹತ್ವಪೂರ್ಣವಾದ ಸಂಸ್ಥೆಯಾಗಿದೆ ಎಂದು ಬಿಂಬಿಸಲಾಗಿದೆ. ಇಂದು ಮಹಿಳೆಯ ಎಲ್ಲಾ ಚಟುವಟಿಕೆಗಳು ಕೂಡ ಕುಟುಂಬದ ಪರಿಧಿಯಲ್ಲಿಯೇ ಹೆಚ್ಚಾಗಿ ನಡೆಯುತ್ತವೆ. ಹಾಗಾಗಿ ಮಹಿಳೆಗೆ ಸಂಬಂಧಿಸಿದ ಯಾವುದೆ ಚರ್ಚೆಗಳಾಗಲೀ ಅಥವಾ ಅಧ್ಯಯನಗಳಾಗಲೀ ಕುಟುಂಬವನ್ನು ಒಳಗೊಂಡಂತೆಯೇ ನಡೆಯುತ್ತವೆ. ಕುಟುಂಬದಲ್ಲಿ ಮಹಿಳೆ ಮಗಳಾಗಿ, ಸೊಸೆಯಾಗಿ, ಪತ್ನಿಯಾಗಿ, ತಾಯಿಯಾಗಿ ಹೀಗೆ ಹಲವಾರು ಪಾತ್ರಗಳನ್ನು ವಹಿಸುತ್ತಿದ್ದಾಳೆ. ಈ ಪಾತ್ರಗಳಿಗೆ ಅನುಗುಣವಾಗಿ ಜವಾಬ್ದಾರಿಗಳನ್ನು ಸಹ ನಿರ್ವಹಿಸುತ್ತಿದ್ದಾಳೆ. ಹಾಗಾಗಿ ಕುಟುಂಬದ ಪ್ರತಿಯೊಬ್ಬ ಸದಸ್ಯರೂ ಕೂಡ ಅವಳಿಂದ ಏನನ್ನಾದರೂ ನಿರೀಕ್ಷಿಸುತ್ತಲೇ ಇರುತ್ತಾರೆ. ಅವಳು ಎಲ್ಲ ನಿರೀಕ್ಷೆಗಳಿಗೆ ಅನುಗುಣವಾಗಿ ಕಾರ್ಯಗಳನ್ನು ಮಾಡುತ್ತಿದ್ದಾಳೆ. ಇದಕ್ಕೆ ನಿಗದಿತ ಸಮಯ ಎಂದಾಗಲೀ ಅಥವಾ ಬಿಡುವಿನ ಸಮಯ ಎಂದಾಗಲೀ ಇರದೆ ನಿರಂತರವಾಗಿ ಕೆಲಸಕಾರ್ಯಗಳಲ್ಲಿ ತೊಡಗಿಕೊಂಡೇ ಇರುತ್ತಾಳೆ. ಆದರೆ ಇಷ್ಟೇಲ್ಲಾ ಬಿಡುವಿಲ್ಲದೇ ದುಡಿಯುತ್ತಿದ್ದರೂ ಸಹ ಅವಳಿಗೆ ಹಿಂಸೆ ಎಂಬುದು ತಪ್ಪಿಲ್ಲ. ಕುಟುಂಬದಲ್ಲಿ ಮಾನಸಿಕವಾಗಿ ದೈಹಿಕವಾಗಿ, ಲೈಂಗಿಕವಾಗಿ ಹಲವಾರು ರೀತಿಯಲ್ಲಿ ಹಿಂಸೆಯನ್ನು ಅನುಭವಿಸುತ್ತಲೇ ಇದ್ದಾಳೆ.

"ಹಿಂಸೆ" ಎಂಬ ಪದಕ್ಕೆ ಒಂದು ನಿರ್ದಿಷ್ಟವಾದ ಅರ್ಥಕೊಡಲು ಸಾಧ್ಯವಿಲ್ಲ. ಹಿಂಸೆ ಎಂದರೆ ಕಿರುಕುಳವನ್ನು ನೀಡುವುದು ಎನ್ನಬಹುದು. ಹಲವಾರು ಭಾರತೀಯ ಧರ್ಮಶಾಸ್ತ್ರಜ್ಞರು ಭಾರತೀಯ ಸ್ತ್ರೀ ಹೇಗಿರಬೇಕು ಎಂಬುದನ್ನು ಹೀಗೆ ತಿಳಿಸುತ್ತಾರೆ.

"ಪತಿ ಚಾರಿತ್ರ್ಯ" ಹೀನ, ವಿಷಯಾಸಕ್ತ ಮತ್ತು ಒಳ್ಳೆಯ ಗುಣಗಳ ಅಭಾವ ಉಳ್ಳವನಾಗಿದ್ದರೂ ಪತ್ನಿಯು ಅವನನ್ನು ದೇವರಂತೆಯೇ ಕಾಣಬೇಕು" (ಮನು ೫-೧೫೪).

"ಸ್ತ್ರೀಯರು ತಮ್ಮ ಪತಿಯ ಆಜ್ಞೆಯನ್ನು ಪಾಲಿಸಬೇಕು. ಇದೇ ಅವರ ಪರಮ ಧರ್ಮವಾಗಿದೆ".

(ಯಜ್ಞವಲ್ಕ್ಯ ೧-೧೮)

"ಸ್ತ್ರೀಗೆ ಪತಿಯ ಹೊರತಾಗಿ ಬೇರೆ ಲೋಕವು ಇಲ್ಲ. ಯಾವ ಸ್ತ್ರೀಯು ತನ್ನ ಪತಿಗೆ ವಿರುದ್ಧವಾಗಿ ವರ್ತಿಸುತ್ತಾಳೋ, ಅವಳು ಮರಣಾನಂತರ ಪತಿಯ ಲೋಕಕ್ಕೆ ಹೋಗುವುದಕ್ಕೆ ಶಕ್ತಳಾಗಿರುವುದಿಲ್ಲ, ಹಾಗಾಗಿಯೇ, ಹಾಗಾಗಿಯೇ ಅವಳು ಎಂದಿಗೂ ಪತಿಯ ವಿರುದ್ಧವಾಗಿ ನಡೆಯಬಾರದು.

(ವಾನಿಷ್ಟ ೨೧-೧೪).

"ಯಾವ ಸ್ತ್ರೀಯು ತನ್ನ ಪಿತನ ಕುಲ ಅಭಿಮಾನವನ್ನು ಕಾಯುತ್ತಾ ತನ್ನ ಪತಿಯನ್ನು ಅವಜ್ಞೆ ಮಾಡುತ್ತಾಳೋ ಅಂಥವಳ ಕೈಯ ಅನ್ನವನ್ನು ಯಾರೂ ತಿನ್ನಬಾರದು. ಅಂಥ ಸ್ತ್ರೀಯನ್ನು ಕುಲಚೆಯೆಂದೇ ತಿಳಿಯಬೇಕು" (ಅಂಗೀರಸ ೬೯)[1]

ಹೀಗೆ ಇರಬೇಕು ಎಂಬುದು ಸ್ತ್ರೀಯರ ಶೋಷಣೆಗೆ ಮುನ್ನುಡಿಯನ್ನು ಹಾಡುತ್ತದೆ. ಸ್ಮೃತಿ ಗ್ರಂಥಗಳಲ್ಲಿನ ಈ ರೀತಿಯ ಹೇಳಿಕೆಗಳು ಭಾರತೀಯ ಸ್ತ್ರೀಗೆ ಇರಬೇಕಾದ ಎಲ್ಲಾ ಸ್ವಾತಂತ್ರ್ಯಗಳನ್ನು ಕಿತ್ತುಕೊಂಡುಬಿಟ್ಟಿದೆ. ಈ ರೀತಿಯ ಮೌಲ್ಯಗಳು ಇಂದಿಗೂ ಪಾಲಿತವಾಗುತ್ತಿವೆ. ಆದರೆ ಇವುಗಳ ಸ್ವರೂಪ ಮಾತ್ರ ಬೇರೆಯಾಗಿದೆಯಷ್ಟೇ. ಶಾಸ್ತ್ರೋಕ್ತವಾಗಿ ನಡೆದುಕೊಂಡು, ಸ್ಮೃತಿಗಳಿಗೆ ಬದ್ಧವಾಗಿ ನಡೆಯುತ್ತಿರುವ ಮಹಿಳೆಯರು ಇಂದಿಗೂ ಕಂಡುಬರುತ್ತಾರೆ. ಆಧುನೀಕರಣದ ಈ ಸಂದರ್ಭದಲ್ಲಿ ಸುರಕ್ಷಿತ ಮಹಿಳೆಯರೂ ಈ ಸ್ಮೃತಿಗಳಿಗೆ ಬದ್ಧರಾಗಿಲ್ಲ ಎಂದು ಹೇಳಲಾಗುತ್ತಿದ್ದರೂ ಸಹ ದಾಸ್ಯದ ಜೀವನವನ್ನು ಸಾಗಿಸುತ್ತಿರುವುದು ಕಂಡುಬರುತ್ತಿದೆ. ಇದಕ್ಕೆ ಪೂರಕ ಎಂಬಂತೆ ಇಂದಿನ ಸಂದರ್ಭದಲ್ಲಿ ಮಹಿಳೆ ಅನುಭವಿಸುತ್ತಿರುವ ಹಿಂಸೆಯೇ ಸಾಕ್ಷಿಯಾಗಿ ನಿಲ್ಲುತ್ತದೆ.

ಕಾನೂನಿ ಪ್ರಕಾರ ಕೌಟುಂಬಿಕ ಹಿಂಸೆ ಎಂದರೆ ಮಹಿಳೆಯ ಮೇಲೆ ದಿನ ನಿತ್ಯ ತನ್ನ ಗಂಡನಿಂದ ಅಥವಾ ಗಂಡನ ಸಂಬಂಧಿಕರಿಂದ ಅಂದರೆ ಅತ್ತೆ, ಮಾವ, ನಾದಿನಿ, ಸಹೋದರ ಇತ್ಯಾದಿಯವರಿಂದ ನಡೆಯುವ ಅಥವಾ ನಡೆಯುತ್ತಿರುವ ದೌರ್ಜನ್ಯವಾಗಿದೆ. ಕೌಟುಂಬಿಕ ಹಿಂಸೆ ಎನ್ನುವಾಗ ಸಾಮಾನ್ಯವಾಗಿ ಕಾನೂನಿ ಪರಿಭಾಷೆಯೂ ಕೂಡ ವಿವಾಹಿತ ಮಹಿಳೆಯ ಮೇಲಾಗುವ ದೌರ್ಜನ್ಯವನ್ನು ಮುಖ್ಯವಾಗಿ ಪರಿಗಣಿಸುತ್ತದೆ. ವಾಸ್ತವದಲ್ಲಿಯಾದರೆ ಅವಿವಾಹಿತ ಸ್ಥಿತಿಯಲ್ಲಿ, ವಿವಾಹ ಪೂರ್ವದ ಕೌಟುಂಬಿಕ

ಸಂದರ್ಭದಲ್ಲಿ ಕೂಡ ಇದು ತೀವ್ರ ಸ್ವರೂಪದ್ದೇ ಆಗಿರುತ್ತದೆ. ಇಲ್ಲಿ ಮುಖ್ಯವಾಗಿ ಕೌಟುಂಬಿಕ ಹಿಂಸೆಯನ್ನು ಎರಡು ವಿಭಾಗಗಳಲ್ಲಿ ವಿಂಗಡಿಸಿಕೊಳ್ಳಬೇಕಾಗುತ್ತದೆ. ಮೊದಲನೆಯದಾಗಿ ತಾನು ಹುಟ್ಟಿ ಬೆಳೆದಂತಹ ತವರು ಮನೆಯಲ್ಲಿನ ಕೌಟುಂಬಿಕ ಹಿಂಸೆ, ಎರಡನೆಯದಾಗಿ ತಾನು ಮದುವೆಯಾದ ನಂತರ ಗಂಡನ ಮನೆಯಲ್ಲಿನ ಕೌಟುಂಬಿಕ ಹಿಂಸೆ. ಈ ಎರಡೂ ಕುಟುಂಬಗಳಲ್ಲಿಯೂ ಸಹ ಮಹಿಳೆ ಹಿಂಸೆಯನ್ನು ಅನುಭವಿಸುತ್ತಲೇ ಇದ್ದಾಳೆ.

ಕುಟುಂಬಗಳಲ್ಲಿ ಹೆಣ್ಣಿನ ಮೇಲಿನ ಹಿಂಸೆಯು ಭ್ರೂಣಾವಸ್ಥೆಯಲ್ಲಿಯೇ ಆರಂಭಾಗುತ್ತದೆ. ಹೆಣ್ಣು ಭ್ರೂಣಗಳು ಹಾಗೂ ಹೆಣ್ಣು ಶಿಶುಗಳ ಹತ್ಯೆಯ ತವರಿನಲ್ಲಿಯೇ ಎದುರಿಸುವ ಎರಡು ಪ್ರಮುಖ ಹಿಂಸೆಗಳಾಗಿವೆ. ಹಾಗೆಯೇ ಲಿಂಗತಾರತಮ್ಯವೂ ಸಹ ತವರಿನಲ್ಲಿ ಎದುರಿಸುವ ಹಿಂಸೆಯ ಮತ್ತೊಂದು ಸ್ವರೂಪವಾಗಿದೆ. ಭ್ರೂಣ, ಶಿಶುಹತ್ಯೆಗಳ ಹಂತಗಳನ್ನು ದಾಟಿ ಹೆಣ್ಣು ಮಗುವೊಂದು ಕುಟುಂಬದಲ್ಲಿ ಉಳಿದರೂ ಆ ಕುಟುಂಬದಲ್ಲಿ ಹೆಣ್ಣು ಮಗುವು ಆದರ ಪೂರ್ವಕವಾದ ಜೀವನವನ್ನು ನಡೆಸುತ್ತದೆ ಎಂದು ತಿಳಿಯುವುದು ತಪ್ಪು. ಏಕೆಂದರೆ ಆ ಮಗು ಆಹಾರ, ಆರೋಗ್ಯ, ಶಿಕ್ಷಣ, ಕುಟುಂಬದ ದುಡಿಮೆ ಇತ್ಯಾದಿ ಎಲ್ಲಾ ಹಂತಗಳಲ್ಲಿಯೂ ನಿರ್ಲಕ್ಷ್ಯಕ್ಕೆ ಒಳಪಟ್ಟು ಬೆಳೆಯುತ್ತದೆ. ತವರನ್ನು ಹೆಣ್ಣಿನ ಸುಖದ ದಿನಗಳ ಬದುಕಾಗಿ ಗ್ರಹಿಸುವ ಸಮಾಜದಲ್ಲಿಯೇ ಹೆಣ್ಣು, ಅಪಮಾನ, ಅಸಹಾಯಕತೆ, ಅನಾದಾರಗಳ ಬದಕನ್ನು ನಡೆಸುತ್ತಾಳೆ.

ಕುಟುಂಬದಲ್ಲಿ ಹೆಣ್ಣು ಮಗು ಋತುಮತಿಯಾಗುವುದಕ್ಕಿಂತ ಮೊದಲು ಕೆಲವು ಸಮಸ್ಯೆಗಳನ್ನು ಎದುರಿಸಿದರೆ ಅದರ ನಂತರದ್ದೇ ಬೇರೆ ಬೇರೆ ಸಮಸ್ಯೆಗಳನ್ನು ಎದುರಿಸುತ್ತಾಳೆ. ಋತುಮತಿಯಾಗುವುದಕ್ಕಿಂತ ಮುಂಚಿನ ಸಮಸ್ಯೆಗಳಲ್ಲಿ ಹೆಚ್ಚಿನವು ಅಸಮಾನತೆಯನ್ನು ಕುರಿತಾದವು. ತಂದೆ-ತಾಯಿಗಳಿಂದ ಹಿಡಿದು, ರಕ್ತ ಸಂಬಂಧಗಳೆಲ್ಲ ಗಂಡು ಮಗುವಿನ ಜನನವನ್ನು ಹರ್ಷದಿಂದ, ಸಂಭ್ರಮದಿಂದ ಸ್ವಾಗತಿಸಿದರೆ, ಹೆಣ್ಣು ಮಗುವಿನ ಆಗಮನವನ್ನು ಇಷ್ಟವಿಲ್ಲದೇ ಸಹಿಸುತ್ತಾರೆ. ಈಗಂತೂ ಹುಟ್ಟುವ ಮಗು ಹೆಣ್ಣು ಎಂದು ಮೊದಲೇ ತಿಳಿದರೆ ಗರ್ಭಪಾತಮಾಡಿಕೊಳ್ಳುವ ಅಥವಾ ಮಾಡಿಸಿಬಿಡುವ ತಂದೆ ತಾಯಂದಿರೇ ಹೆಚ್ಚಾಗುತ್ತಿದ್ದಾರೆ. ಆಹಾರ, ವಿದ್ಯೆಗಳ ವಿಷಯದಲ್ಲಿ ತಾರತಮ್ಯ ತಪ್ಪದು. ಬೇರೆಯವರ ಮನೆಯ ಗಿಡವನ್ನು ತಾವೇಕೆ ಗೊಬ್ಬರ ಹಾಕಿ ಪೋಷಿಸಬೇಕೆಂಬ ಭಾವನೆ ತಂದೆ ತಾಯಿಗಳಲ್ಲಿ ಇರುವುದರಿಂದ ಹೆಣ್ಣು ಮಗುವನ್ನು ಕೀಳಾಗಿ ಕಾಣುತ್ತಾರೆ. ಇಷ್ಟೇ ಅಲ್ಲದೆ ಮಕ್ಕಳಿಗೆ ನೀಡುವ ಆಟಿಕೆಗಳು,ತೊಡಿಸುವ ಬಟ್ಟೆ ಬರೆಗಳು, ಅವರಿಗೆ ಕಲಿಸುವ ನಡೆನುಡಿಗಳು, ಇವುಗಳಲ್ಲೆಲ್ಲ ಮಾಡುವ ಭೇಧ ಹೆಣ್ಣು ಮಗುವಿನಲ್ಲಿ ತಾನು ಗಂಡಿಗಿಂತ ಭಿನ್ನ, ಕೀಳು ಎಂಬ ಭಾವನೆಯನ್ನು ಬಿತ್ತಿ ಬೆಳೆಸುವಂತಹದು. ಹೀಗಾಗಿ ಹೆಣ್ಣು ಮಗು ಮಾನಸಿಕವಾಗಿ ತುಂಬಾ ನೋವನ್ನು ಅನುಭವಿಸುತ್ತಿರುತ್ತಾಳೆ. ಅನೇಕ ಹೆಣ್ಣು ಮಕ್ಕಳು ತಂದೆ ತಾಯಿಯರಿಂದ ಹೊಡೆಯಿಸಿಕೊಳ್ಳುತ್ತಾರೆ ಅದರಿಂದ ಮಾನಸಿಕವಾಗಿಯೂ ದೈಹಿಕವಾಗಿಯೂ ನೋವನ್ನು ಅನುಭವಿಸುತ್ತಾರೆ. ಇನ್ನು ಮೊದಲ ಮುಟ್ಟು ಹೆಣ್ಣಿನ ಜೀವನದಲ್ಲಿ ಅತ್ಯಂತ ಮಹತ್ವದ ಘಟ್ಟವಾಗಿದೆ. ಈ ಸಂದರ್ಭದಲ್ಲಿ

ಆಗುವಂತಹ ಬದಲಾವಣೆಗಳು ಅವಳ ಮನಸ್ಸಿನ ಮೇಲೆ ಘಾಡವಾದ ಪ್ರಭಾವವನ್ನು ಬೀರುತ್ತದೆ. ಅನೇಕ ಸಮುದಾಯಗಳಲ್ಲಿ ಮೈ ನೆರೆದ ಮೇಲೆ ಶಾಲೆಗೆ ಹೋಗುವುದನ್ನು ಬಿಡಿಸಿಬಿಡುತ್ತಾರೆ. ಈ ಅವಧಿಯು ಹೆಣ್ಣು ಮಗುವಿಗೆ ಕಠಿಣವಾದ ಕಾಲವಾಗಿದೆ. ಏಕೆಂದರೆ ಎಲ್ಲಾ ಸಾಮಾಜಿಕ, ಧಾರ್ಮಿಕ ಕಟ್ಟಳೆಗಳು ಈ ಹಂತದಲ್ಲಿಯೇ ಹೆಣ್ಣಿನ ಮೇಲೆ ಹೇರಲಾಗುತ್ತದೆ. ಒಂಟಿಯಾಗಿ ತಿರುಗುವುದನ್ನು, ಹುಡುಗರ ಜೊತೆ ಬೆರೆಯುವುದನ್ನು ತಡೆಯಲಾಗುತ್ತದೆ. ಅಷ್ಟೇ ಅಲ್ಲ ಮೆಲ್ಲಗೆ ನಡೆಯಬೇಕು, ಹಾರಿ-ಕುಣಿದು-ಓಡಿ ಮಾಡಬಾರದು, ಗಂಡಸರಂತೆ ಕತ್ತರಿಗಾಲಲ್ಲಿ ಕುಳಿತುಕೊಳ್ಳಬಾರದು, ಜೋರಾಗಿ ಮಾತನಾಡಬಾರದು, ಜೋರಾಗಿ ನಗಬಾರದು, ಹೀಗೆ ನಾನಾ ವಿಧದಲ್ಲಿ ಅವಳ ಬದುಕಿಗೆ ಒಂದು ಚೌಕಟ್ಟನ್ನು ಹಾಕಲಾಗುತ್ತದೆ. ಒಂದು ವೇಳೆ ಋತುಮತಿಯಾದ ನಂತರವೂ ವಿದ್ಯಾಭ್ಯಾಸವನ್ನು ಮುಂದುವರೆಸಿದರೆ ಗಂಡು ಹುಡುಗರನ್ನು ಸ್ನೇಹಿತರನ್ನಾಗಿ ಮಾಡಿಕೊಳ್ಳಬಾರದು. ಒಂದು ವೇಳೆ ಮಾಡಿಕೊಂಡರೆ ಕುಟುಂಬದಲ್ಲಿ ದಿನಾಲೂ ಜಗಳಗಳು ಆರಂಭವಾಗುತ್ತವೆ. ಇದರಿಂದಲೂ ಸಹ ಮಾನಸಿಕವಾಗಿ ಬಹಳ ನೋವನ್ನು ಅನುಭವಿಸಬೇಕಾಗುತ್ತದೆ. ಮಗಳು ಏನಾದರೂ ತಪ್ಪು ಎಸಗಿದರೆ ಅದಕ್ಕೆ ಅವಳ ಅಮ್ಮನನ್ನು ಹೊಣೆಗಾರಳನ್ನಾಗಿ ಮಾಡಿ ಅವಳನ್ನು ಶಿಕ್ಷಿಸಲಾಗುತ್ತದೆ. ಏಕೆಂದರೆ ಮಕ್ಕಳ ಬೆಳವಣಿಗೆಯ ಸಂಪೂರ್ಣ ಜವಾಬ್ದಾರಿಯನ್ನು ಅವಳೇ ಹೊತ್ತಿರುತ್ತಾಳೆ. ನಮ್ಮ ಸಮಾಜ ತಾಯಿಯನ್ನು ಆರಾಧನೆಯ ನೆಲೆಯಲ್ಲಿ ಕಾಣುತ್ತಿದೆ. ಸರ್ವನಮಸ್ಕಾರಗಳಿಗೂ ಮುಂಜಿತವಾಗಿ "ಮಾತೃದೇವೋಭವ" ಎಂದು ತಾಯಿಗೆ ನಮಸ್ಕರಿಸಲಾಗುತ್ತದೆ. "ತಾಯಿಗಿಂತ ಬಂಧುವಿಲ್ಲ, ಉಪ್ಪಿಗಿಂತ ರುಚಿಯಿಲ್ಲ" ಎಂಬ ಗಾದೆಯೊಂದಿದೆ "ಮಾತೆಯಿಂ ಹಿತರಿಲ್ಲ" ಎಂಬ ಸರ್ವಜ್ಞನ ನುಡಿ, ವ್ಯಕ್ತಿಯ ಜೀವನದಲ್ಲಿ ತಾಯಿಗಿರುವ ಮಹತ್ವವನ್ನು ಎತ್ತಿ ತೋರಿಸುತ್ತದೆ. ಭಾರತೀಯ ಸಂಸ್ಕೃತಿಯಲ್ಲಿ ತಾಯಿಗೆ ಇಷ್ಟೊಂದು ಪ್ರಾಧಾನ್ಯತೆಯನ್ನು ನೀಡಲಾಗುತ್ತದೆ. ಆದರೆ ಇದು ಕೇವಲ ಸಭೆ ಸಮಾರಂಭಗಳಲ್ಲಿ ಹೇಳುವುದಕ್ಕೆ ಮಾತ್ರ ಸೀತವಾಗಿದೆ. ವಾಸ್ತವದಲ್ಲಿ ಇದೆಲ್ಲವೂ ಸುಳ್ಳು. ಏಕೆಂದರೆ ಒಂದು ಕುಟುಂಬದಲ್ಲಿ ಎಲ್ಲಾ ಆಗು ಹೋಗುಗಳಿಗೆ ತಾಯಿಯನ್ನೇ ಗುರಿಯಾಗಿಸಿ ಅವಳನ್ನು ಅನೇಕ ಬಗೆಯಲ್ಲಿ ಹಿಂಸಿಸುತ್ತಿದ್ದಾರೆ. ಪೋಷಣೆಯ ಜವಾಬ್ದಾರಿ ತಾಯಿಯ ಮೇಲೆಯೇ ಇರುತ್ತದೆ. ಹಾಗಾಗಿ ಮಕ್ಕಳು ಅದರಲ್ಲಿಯೂ ಹೆಣ್ಣು ಮಕ್ಕಳೇನಾದರೂ ತಪ್ಪು ಮಾಡಿದರೆ ಮೊದಲು ತಾಯಿಯನ್ನೇ ಆರೋಪಿಯನ್ನಾಗಿ ಮಾಡಲಾಗುತ್ತದೆ. ಹೆಣ್ಣು ಮಗು ಋತುಮತಿಯಾಗಿ ೨, ೩ ವರ್ಷಗಳಲ್ಲಿಯೇ ಅವಳಿಗೆ ಮದುವೆಯಾಗಿಬಿಡಬೇಕು ಎಂಬ ಆಲೋಚನೆಗಳು ಈ ತಂದೆತಾಯಿಯರದ್ದಾಗಿರುತ್ತದೆ, ಮದುವೆಯಾಗುವುದು ತಡವಾದರೆ ಕುಟುಂಬದಲ್ಲಿ ದಿನಾಲೂ ಬೈಯಿಸಿಕೊಳ್ಳುವುದು ಅವಳಿಗೆ ತಪ್ಪುವುದಿಲ್ಲ. ಹಾಗೆಯೇ ಮನೆಯಲ್ಲಿ ನಡೆಯುವ ಎಲ್ಲಾ ಅನಿಷ್ಟಗಳಿಗೆ ಅವಳನ್ನೇ ಧೂಷಿಸುತ್ತಾರೆ. ಅವಳು ಪಕ್ಕದ ಮನೆಯವರೊಂದಿಗೆ ಚೆನ್ನಾಗಿ ಮಾತನಾಡುವಂತಿಲ್ಲ, ಒಬ್ಬೊಂಟಿಯಾಗಿ ಎಲ್ಲಿಗೂ ಹೋಗುವಂತಿಲ್ಲ ಹೀಗೇನಾದರೂ ಮಾಡಿದರೆ ವಯಸ್ಸಿಗೆ ಬಂದ ಹುಡುಗಿ ಹಾಗೆಲ್ಲಾ ಮಾಡಬಾರದು, ಹಾಗೆಲ್ಲಾ ಮಾಡಿದರೆ ಜನ ಏನೆಂದುಕೊಳ್ಳುತ್ತಾರೆ ಎಂದು ಬೈಯುತ್ತಾರೆ. ಮದುವೆಯ ವಯಸ್ಸು ದಾಟಿದರಂತೂ ಮುಗಿದೇ ಹೋಯಿತು ಅವಳ ಜೀವನ ನರಕಮಯವಾಗಿಬಿಡುತ್ತದೆ. ಇವಳು ಯಾವಾಗ ನಮ್ಮ ಮನೆಯಿಂದ ತೊಲಗುತ್ತಾಳೋ, ಇವಳನ್ನು ಹೇಗೆ ಖರ್ಚು ಮಾಡುವುದು,

ಇವಳನ್ನು ಮದುವೆ ಮಾಡಿಕೊಟ್ಟರೆ ನಮಗೆ ಒಂದು ದೊಡ್ಡ ಭಾರ ಇಳಿಯುತ್ತದೆ, ಇವಳು ಮನೆಯಲ್ಲಿ ಇದ್ದಷ್ಟು ದಿನ ನಮಗೆ ಕಷ್ಟಗಳು ತಪ್ಪಲ್ಲ ಹೀಗೆ ನಾನಾ ರೀತಿಯ ಚುಚ್ಚು ಮಾತುಗಳಿಂದ ಹೀಯಾಳಿಸುತ್ತಲೇ ಇರುತ್ತಾರೆ. ಕುಟುಂಬದಲ್ಲಿ ಒಂದು ಹೆಣ್ಣು ಮಗು ಮದುವೆಯಾಗದೇ ಬಹಳಷ್ಟು ದಿನ ಇದ್ದರೆ ಅದು ಆ ಕುಟುಂಬಕ್ಕೆ ಒಂದು ರೀತಿಯ ಅವಮಾನಕರವಾದ ಸಂಗತಿಯಾಗಿರುತ್ತದೆ. ಹಾಗಾಗಿ ಮನೆಯಲ್ಲಿ ಎಷ್ಟೇ ಕಷ್ಟ ಬರಲಿ, ಮೊದಲು ಮಗಳ ಮದುವೆ ಮಾಡಿ ಕೊಟ್ಟು ಬಿಡುತ್ತಾರೆ. ಇದು ಎಲ್ಲಾ ಸಮುದಾಯಗಳ ಕುಟುಂಬ ವ್ಯವಸ್ಥೆಯಲ್ಲಿಯೂ ಕಂಡುಬರುವಂತಹ ಸಾಮಾನ್ಯ ವಿಷಯವಾಗಿಬಿಟ್ಟಿದೆ. ಹೆಣ್ಣು ಮಗುವನ್ನು ಒಂದು ಮಾರಾಟದ ವಸ್ತುವನ್ನಾಗಿಸಿ ಅವಳ ಎಲ್ಲಾ ಸ್ವಾತಂತ್ರ್ಯವನ್ನು ಕಿತ್ತುಕೊಂಡು ಬಿಟ್ಟಿರುತ್ತಾರೆ. ಹೀಗಾಗಿ ತನ್ನ ಸ್ವಂತ ಕುಟುಂಬದಲ್ಲಿಯೇ ಮಹಿಳೆ ಸಾಕಷ್ಟು ಹಿಂಸೆಗಳನ್ನು ಅನುಭವಿಸುತ್ತಲೇ ಬಂದಿದ್ದಾಳೆ. ಮತ್ತೆ ಕೆಲವು ಕುಟುಂಬಗಳಲ್ಲಿ ಕುಡುಕ ತಂದೆಯಿಂದ ಮಕ್ಕಳು ತುಂಬಾ ಹಿಂಸೆಯನ್ನು ಅನುಭವಿಸುತ್ತಾಳೆ. ಬಹಳ ಪ್ರಮುಖ ವಿಷಯವೆಂದರೆ ಪ್ರಸ್ತುತ ಸಂದರ್ಭದಲ್ಲಿ ಹೆತ್ತ ತಂದೆಯೇ ಮಕ್ಕಳಿಗೆ ಲೈಂಗಿಕವಾಗಿ ಕಿರುಕುಳಗಳನ್ನು ಕೊಡುತ್ತಿರುವ ಪ್ರಸಂಗಗಳು ನಡೆಯುತ್ತಿವೆ. ಪುರುಷ ವ್ಯವಸ್ಥೆ ತಾನೇ ನಿರ್ಮಿಸಿಕೊಂಡಿರುವ ಈ ವ್ಯವಸ್ಥೆಯ ಮೌಲ್ಯಗಳಿಗೆ ಅನುಗುಣವಾಗಿಯೂ ಜೀವನ ಸಾಗಿಸುತ್ತಿಲ್ಲ. ಹಾಗಾಗಿ ಈ ರೀತಿಯ ಲೈಂಗಿಕ ಕಿರುಕುಳಗಳನ್ನು ಅನುಭವಿಸುವ ಮಹಿಳೆಯ ಮುಂದಿನ ಬದುಕು ಹೇಳಲಸಾಧ್ಯವಾಗಿದೆ. ಇನ್ನು ಹೆತ್ತ ಮಗಳ ಮೇಲೆಯೆ ಅತ್ಯಾಚಾರ ಮಾಡುತ್ತಿರುವಂತಹ ಘಟನೆಗಳು ಇತ್ತೀಚೆಗಂತೂ ಹೆಚ್ಚಾಗುತ್ತಲೇ ಇವೆ. ಈ ರೀತಿಯ ಘಟನೆಗಳಿಂದಲೂ ಕೂಡ ಮಹಿಳೆ ತನ್ನ ಸ್ವಂತ ಕುಟುಂಬದಲ್ಲಿಯೇ ಹಲವಾರು ರೀತಿಯಲ್ಲಿ ಹಿಂಸೆಯನ್ನು ಅನುಭವಿಸುತ್ತಲೇ ಇದ್ದಾಳೆ.

ಎರಡನೆಯದಾಗಿ ಮದುವೆಯ ನಂತರದಲ್ಲಿಯ ಹಿಂಸೆಗಳು. ಮದುವೆ ಎನ್ನುವ ಸಂಸ್ಥೆಯಿಂದ ತವರಿಗೆ ವಿದಾಯ ಹೇಳಿ ಗಂಡನ ಮನೆಯನ್ನು ಪ್ರವೇಶಿಸಿದ ನಂತರ ಮಹಿಳೆ ಕೌಟುಂಬಿಕ ಹಿಂಸೆಯ ಇನ್ನೊಂದು ಮುಖವನ್ನು ಕಾಣುತ್ತಾಳೆ. ಕೌಟುಂಬಿಕ ಜವಾಬ್ದಾರಿಗಳನ್ನು ಗ್ರಹಿಸಲಾರದ ಗ್ರಹಿಸಿದರೂ ಹೊರಲಾರದ ಬಾಲ್ಯವು ಗಂಡನ ಮನೆಯಲ್ಲಿ ಗಂಡ, ಅತ್ತೆ, ಮಾವ, ನಾದಿನಿ ಮತ್ತು ಅವರ ಸಂಬಂಧಿಕರು ಹೀಗೆ ಮುಂತಾದವರಿಂದ ನಾನಾ ರೀತಿಯಲ್ಲಿ ಹಿಂಸೆಯನ್ನು ಅನುಭವಿಸುತ್ತಲೇ ಇದ್ದಾಳೆ. ಕುಡಿತಕ್ಕೆ ದಾಸನಾದ ಗಂಡನಿದ್ದರೆ ಆ ಕುಟುಂಬದಲ್ಲಿ ಜಗಳಗಳು ಸಾಮಾನ್ಯವಾಗಿಬಿಟ್ಟಿರುತ್ತವೆ. ಇದು ಎಲ್ಲಾ ವರ್ಗಗಳ ಕುಟುಂಬಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಇಲ್ಲಿ ಬಡ ಮತ್ತು ಕೆಳವರ್ಗಗಳ ಕುಟುಂಬಗಳಲ್ಲಿಯ ಜಗಳ ಇಡೀ ಸಮಾಜಕ್ಕೇ ಗೊತ್ತಾಗಿಬಿಡುತ್ತದೆ. ಆದರೆ ಮೇಲ್ವರ್ಗದಲ್ಲಿನ ಕುಟುಂಬಗಳಲ್ಲಿ ಪುರುಷರು ಜಗಳವಾಡಿದರೂ ಸಹ ಅದು ಸಮಾಜಕ್ಕೆ ತಿಳಿದುಬರುವುದಿಲ್ಲ. ಅಲ್ಲಿ ಮಹಿಳೆ ಮಾನಸಿಕವಾಗಿ ಬಹಳ ಹಿಂಸೆಯನ್ನು ಅನುಭವಿಸುತ್ತಿರುತ್ತಾಳೆ. ಆದರೆ ಆ ಹಿಂಸೆಯನ್ನು ಯಾರಿಗೂ ಹೇಳದೇ ತನ್ನಲ್ಲಿಯೇ ಮುಚ್ಚಿಟ್ಟುಕೊಂಡಬಿಡುತ್ತಾಳೆ. ಇದಕ್ಕೆ ಕಾರಣ ಮೇಲ್ವರ್ಗದ ಮನೆತನದ ಗೌರವ, ಪ್ರತಿಷ್ಠೆಗಳಿಗೆ ಧಕ್ಕೆ ಬರಬಾರದೆಂದು ಅಲ್ಲಿಯೇ ಹತ್ತಿಕ್ಕಲ್ಪಡುತ್ತವೆ. ಆದರೆ ಕೆಳವರ್ಗದವರಲ್ಲಿ ಹಾಗಿಲ್ಲ. ಇದಕ್ಕೆ ವಿರುದ್ಧವಾದ ಸನ್ನಿವೇಶಗಳು ಕಂಡುಬರುತ್ತವೆ. ಗಂಡ ಕುಡಿದು ಬಂದು ದಿನಾಲೂ ಹೊಡೆಯುವುದು, ಬೈಯುವುದು

ಸಾಮಾನ್ಯವಾಗಿರುತ್ತದೆ. ಹಾಗೆಯೇ ಕುಟುಂಬದಲ್ಲಿ ಗಂಡು-ಹೆಂಡತಿ ಇಬ್ಬರೂ ಕೆಲಸಕ್ಕೆ ಹೋಗಲು ಪ್ರಾರಂಭಿಸಿದರೆ ಆವಾಗ ಗಂಡನಾದವನು ತನ್ನ ದುಡಿತದಿಂದ ಬಂದ ಕೂಲಿಯನ್ನು ಮನೆಗೆ ಕೊಡುವುದನ್ನು ನಿಲ್ಲಿಸಿಬಿಡುತ್ತಾನೆ. ಅನಿವಾರ್ಯವಾಗಿ ಹೆಂಡತಿಯೇ ಮನೆಯ ಖರ್ಚಿಗೆ ತನ್ನ ಕೂಲಿಯನ್ನು ಬಳಸುತ್ತಾಳೆ. ಗಂಡನಾದವನು ತಾನು ದುಡಿದ ಹಣದಿಂದ ಕುಡಿಯುವುದು, ಜೂಜಾಡುವುದು ಹೀಗೆ ನಾನಾ ವಿಧಧ ಕೆಟ್ಟಚಟಗಳಿಗೆ ಬಲಿಯಾಗುತ್ತಾನೆ. ಕೆಲವು ಸಂದರ್ಭಗಳಲ್ಲಿ ಅವನು ಕೆಲಸಕ್ಕೂ ಹೋಗದೆ ಹಣಕೊಡುವಂತೆ ಹೆಂಡತಿಗೆ ಕಿರುಕುಳವನ್ನು ಕೊಡುತ್ತಿರುವ ಸಂಗತಿಗಳೂ ಇವೆ.

ದೈಹಿಕ ಹಿಂಸೆಯನ್ನು ಕಂಡುಹಿಡಿಯುವುದು ಸುಲಭ. ಆದರೆ ಮಾನಸಿಕ ಹಿಂಸೆಯನ್ನು ಕಂಡುಹಿಡುವುದು ಕಷ್ಟ. ಕುಟುಂಬದಲ್ಲಿಯ ಗಂಡ ವಿವಾಹ ಬಾಹೀರ ಸಂಬಂಧವನ್ನು ಹೊಂದಿದ್ದರೆ, ಕುಡಿತದ ಚಟಕ್ಕೆ ದಾಸನಾಗಿದ್ದರೆ, ದುಡಿದ ಹಣವನ್ನು ಮನೆಯ ಸಂಸಾರಕ್ಕೆ ಕೊಡದಿದ್ದರೆ ಹೀಗೆ ನಾನಾ ಕಾರಣಗಳಿಂದ ಮಹಿಳೆ ಹಿಂಸೆಯನ್ನು ಅನುಭವಿಸುತ್ತಲೇ ಇದ್ದಾಳೆ. ಭಾರತೀಯ ನಾರಿಗೆ ಎಷ್ಟೊಂದು ಪತಿಭಕ್ತಿ (ಇಲ್ಲಿ ಪತಿಭಕ್ತಿ ಎಂಬುದೂ ಸಹ ಪುರುಷ ಪ್ರಧಾನ ಮೌಲ್ಯದಲ್ಲಿನ ಒಂದು ಶೋಷಣೆಯ ವಿಧಾನ) ಇರುತ್ತದೆ ಎಂದರೆ ಗಂಡ ಕುಡಿದು ಎಲ್ಲಿಬೇಕಂದರಲ್ಲಿ ಬಿದ್ದಿದ್ದರೂ ಸಹ ಅವನನ್ನು ಮನೆಗೆ ಕರೆತರುತ್ತಾಳೆ. ಆದರೆ ಗಂಡನನ್ನು ಮನೆಗೆ ಕರೆತಂದರೂ ಸಹ ಗಂಡನಿಂದ ಬೈಯಿಸಿಕೊಳ್ಳುವುದು ತಪ್ಪುವುದಿಲ್ಲ. ಕೆಲವು ಸಂದರ್ಭಗಳಲ್ಲಿ ಹೊಡೆಯಿಸಿಕೊಳ್ಳುತ್ತಾಳೆ ಕೂಡ. ಇಷ್ಟೆಲ್ಲಾ ನೋವನ್ನು ದಿನಾಲೂ ಅನುಭವಿಸುತ್ತಲೇ ಇರುತ್ತಾಳೆ. ಏನೂ ಅರಿಯದ ವಯಸ್ಸಿನಲ್ಲಿ ಹೆಣ್ಣು ಮಗುವಿಗೆ ಬಾಲ್ಯ ವಿವಾಹ ಮಾಡಿ ಅವಳು ಗಂಡನನ್ನು ಕಳೆದುಕೊಂಡರೆ “ಮಗನನ್ನು ನುಂಗಿಕೊಂಡವಳು” ಎಂದು ಅತ್ತೆ ಮಾವಂದಿರಿಂದ ಪಟ್ಟವನ್ನು ಕಟ್ಟಿಕೊಳ್ಳುತ್ತಾಳೆ. ಹಾಗೆಯೇ ಅವಳು ಇನ್ನೊಂದು ಮದುವೆಯಾಗುವಂತಿಲ್ಲ ಸಾಯುವವರೆಗೂ ಅಲ್ಲಿಯೇ ಗಂಡನ ಮನೆಯಲ್ಲಿ ಇರಬೇಕು ಅಥವಾ ತವರು ಮನೆಗೆ ಹೋಗಬೇಕೂ ಎನ್ನುವಂತಹ ಗೊಂದಲದಲ್ಲಿ ತೊಳಲಾಡುತ್ತಿರುತ್ತಾಳೆ. ವಿಧವೆಯಾದವಳು ಯಾವುದೇ ಮಂಗಳಕಾರ್ಯದಲ್ಲಿ ಭಾಗವಹಿಸಬಾರದು ಎಂಬುದು ಹಿಂದೂ ಸಂಪ್ರದಾಯವಾದುದರಿಂದ ಅವಳು ಅವುಗಳಿಂದ ದೂರವಿರಬೇಕಾಗುತ್ತದೆ. ಹೀಗೆ ವಿಧವೆಯಾದವಳು ಕುಟುಂಬದಲ್ಲಿ ನಾನಾ ವಿಧದಲ್ಲಿ ಹಿಂಸೆಯನ್ನು ಅನುಭವಿಸುತ್ತಲೇ ಇದ್ದಾಳೆ.

ಕೆಲವು ಕುಟುಂಬಗಳಲ್ಲಿ ಮಹಿಳೆಯರು ತಮಗೆ ಮಕ್ಕಳಾಗಲಿಲ್ಲವೆಂದು ದಿನಾಲೂ ಕಿರುಕುಳನ್ನು ಎದುರಿಸುತ್ತಿದ್ದಾರೆ. ಅವಳನ್ನು “ಬಂಜೆ” “ಗೊಡ್ಡಿ”, ಏನೂ ಕೆಲಸಕ್ಕೆ ಬಾರದವಳು, ಒಂದು ಮಗುವನ್ನು ಹೆರುವುದು ಆಗುತ್ತಿಲ್ಲ ಇವಳಿಗೆ ಹೀಗೆ ನಾನಾ ವಿಧದಲ್ಲಿ ಮಹಿಳೆಯನ್ನೇ ಬೈಯುಲಾಗುತ್ತದೆ. ಆದರೆ ಮಹಿಳೆಗೆ ನಿಸರ್ಗ ನೀಡಿದ ವಿಶಿಷ್ಟವಾದ ಕೊಡುಗೆಯೆಂದರೆ ಫಲವಂತಿಕೆ ಆಕೆಗೆ ಸಮಾಜದಲ್ಲಿಯಾಗಲೀ ಅಥವಾ ಕುಟುಂಬದಲ್ಲಿಯಾಗಲೀ ಒಂದು ಸ್ಥಾನವೇನಾದರೂ ದೊರೆತಿದ್ದರೆ ಅದು ಈ ಕಾರಣದಿಂದಾಗಿಯೇ ಹೆಣ್ಣಿನ ಗರ್ಭಧಾರಣ ಶಕ್ತಿಗೂ ಭೂಮಿಯ ಸಸ್ಯ ಧಾರಣ ಶಕ್ತಿಗೂ ಸಂಬಂಧ ಕಲ್ಪಿಸಲಾಗುತ್ತದೆ. “ಗದ್ದೆಗೆ ಹಸಿರು ಚೆಂದ ಹೆಂಗಸಿಗೆ ಬಸಿರು ಚೆಂದ” ಎಂಬ ಗಾದೆ ಮಾತು ಇದಕ್ಕೆ ಪುಷ್ಟಿಯನ್ನು ಕೊಡುತ್ತದೆ.

ಹಾಗೆಯೆ ಗ್ರಾಮೀಣ ಪ್ರದೇಶಗಳಲ್ಲಿ ಸಂತಾನವಿಲ್ಲದವರಿಗೆ ನಾಟಿ ಔಷಧಿಯನ್ನು ಕೊಡುವುದು ಕಂಡುಬರುತ್ತದೆ. ಇಂತಹ ಪ್ರಯತ್ನಗಳು ಸಫಲವಾಗಿರುವ ಪ್ರಯತ್ನಗಳೂ ಇವೆ ಹಾಗೆಯೇ ವಿಫಲವಾಗಿರುವ ಪ್ರಯತ್ನಗಳು ಇವೆ. ಮಹಿಳೆ ಒಂದು ಸಂತಾನಕ್ಕಾಗಿ ಎಷ್ಟೊಂದು ರೋಧಿಸುತ್ತಾಳೆ ಎಂದರೆ ಅದನ್ನು ಜನಪದ ಗೀತೆಗಳು ಚೆನ್ನಾಗಿ ಕಟ್ಟಿಕೊಡುತ್ತಿವೆ.

"ಕಂಡಕಂಡ ಕಲ್ಲಿಗೆಲ್ಲ ಕೈ ಮುಗಿದಾಯ್ತು

ತಿನ್ನಬಾರದ ಮದ್ದೆಲ್ಲ ತಿಂದದ್ದಾಯ್ತು

ಮಾಡಬಾರದ ಮಾಟ ಮಾಡಿದ್ದಾಯಿತು

ಆದರೂ ಶಿವ ಒಂದು ಸಂತಾನ ಕೊಡಲಿಲ್ಲ.

ಇಷ್ಟೆಲ್ಲಾ ಚಿಕಿತ್ಸೆಗಳನ್ನು ಪಡೆದರೂ ಸಹ ಒಂದು ಮಗುವನ್ನು ಕರುಣಿಸಲಿಲ್ಲ ಎಂದು ಶಿವನಲ್ಲಿ ಮೊರೆಹೋಗುತ್ತಾಳೆ. ಹಾಗೆಯೆ ಕುಟುಂಬದಲ್ಲಿ "ಬಂಜೆ" "ಗೊಡ್ಡಿ" ಎಂಬ ಕುಶಬ್ದಗಳಿಂದ ತಪ್ಪಿಸಿಕೊಳ್ಳಲು

ಕಂದನ ಕುಡು ಶಿವನೆ ಬಂಧನ ಬಿಡಲಾರೆ

ಹಂಗಿನ ಬಾನ ಉಣಲಾರೆ ಮರ್ತ್ಯದಾಗ

ಬಂಜೆಂಬ ಶಬುದ ಹೊರಲಾರೆ"[3]

ಎಂದು ತನ್ನ ಅಳಲನ್ನು ತೋಡಿಕೊಳ್ಳುತ್ತಿರುತ್ತಾಳೆ. ಮಕ್ಕಳಿಲ್ಲದ ಮಹಿಳೆ ಸಮಾಜದ ಕ್ರೂರ ದೃಷ್ಟಿಗೆ ಬೀಳಬೇಕಾಗುತ್ತದೆ. ಸಂತಾನ ಹೀನತೆಗೆ ಗಂಡಿನ ದೈಹಿಕ ದೋಷವಿದ್ದ ಸಂದರ್ಭದಲ್ಲಿಯೂ ಪುರುಷ ಪ್ರಧಾನ ಸಮಾಜ ಅದನ್ನು ಮುಚ್ಚಿಹಾಕಿ ಆ ದೋಷವನ್ನು ಹೆಣ್ಣಿನ ತಲೆಗೇ ಕಟ್ಟಿ ಆಕೆಯನ್ನು ನಿಕೃಷ್ಟವಾಗಿ ಕಾಣಲಾಗುತ್ತಿದೆ. ಇದರಿಂದ ಮಹಿಳೆ ಅತೀ ಹೆಚ್ಚಿನ ಹಿಂಸೆಯನ್ನು ಅನುಭವಿಸುತ್ತಿದ್ದಾಳೆ ಎಂಬುದು ವೇದ್ಯವಾಗುತ್ತದೆ.

ಇನ್ನು ಬರೀ ಹೆಣ್ಣು ಮಕ್ಕಳು ಜನಿಸಿದರಂತೂ ಅವಳಿಗೆ ಕೊಡುವಂತಹ ಕಿರುಕುಳವನ್ನು ಹೇಳತೀರದು. ಏಕೆಂದರೆ ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಪುರುಷನಿಗೆ ಅತ್ಯಂತ ಹೆಚ್ಚಿನ ಮಹತ್ವವನ್ನು ನೀಡಲಾಗುತ್ತದೆ. ಅವನನ್ನು ವಂಶೋದ್ಧಾರಕನೆಂದೇ ಬಿಂಬಿಸಲಾಗಿದೆ. ಗಂಡು ಮಗನಿಂದಲೇ ವಂಶ ಬೆಳೆಯುತ್ತದೆ ಹಾಗೂ ತಾವು ಸತ್ತನಂತರ ಚಿತೆಗೆ ಬೆಂಕಿ ಹಚ್ಚುವವನು ಮಗನೇ ಆಗಿರಬೇಕು ಎಂಬುದು ತಂದೆ ತಾಯಿಗಳ ಆಶಯವಾಗಿರುತ್ತದೆ ಹಾಗಾಗಿ ಗಂಡುಮಗುವಿಗೆ ಅತ್ಯಂತ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಲಾಗುತ್ತದೆ. ಆದರೆ ಮಹಿಳೆ ಗಂಡು ಮಗು ಹೆರುವುದು ಅಥವಾ ಹೆಣ್ಣು ಮಗು ಹೆರುವುದು ಅವಳ ಕೈಯಲ್ಲಿಲ್ಲ. ಇದು ವೈಜ್ಞಾನಿಕವಾಗಿಯೂ ಸಾಬೀತಾಗಿದೆ. ಆದರೆ ಇದರ ಬಗ್ಗೆ ನಮ್ಮ ಜನಕ್ಕೆ ಅರಿವೇ ಇಲ್ಲದಾಗಿದೆ. ಒಂದು ಕುಟುಂಬಕ್ಕೆ ಗಂಡು ಮಗು ಎಷ್ಟೊಂದು ಮುಖ್ಯ ಎಂಬುದನ್ನು ಜನಪದ ಗೀತೆಗಳು ತುಂಬಾ ಚೆನ್ನಾಗಿ ಚಿತ್ರಿಸುತ್ತವೆ.

"ಬಾಲಕರಿಲ್ಲದ ಬಾಲೆದ್ಯಾತರ ಜನ್ಮ

ಬಾಡೀಗಿ ಎತ್ತು ದುಡಿದಂಗ ಬಾಳೆಲೆಯ

ಹಾಸುಂಡು ಬೀಸಿ ಒಗೆದಂಗ.

ಇಲ್ಲಿ ಗಂಡು ಮಗುವಿಗೆ ಜನ್ಮ ನೀಡದಿದ್ದರೆ ಬಾಡಿಗಿ ಎತ್ತು ದುಡಿದಂಗ ಮತ್ತು ಬಾಳೆಲೆಯ ರೀತಿ ಅವಳ ಬಾಳು ಆಗುತ್ತದೆ ಎಂಬುದನ್ನು ತಿಳಿಸುತ್ತದೆ. ಇಲ್ಲಿ ಮುಖ್ಯವಾಗಿ ನಾವು ಗಂಡು ಮಗುವನ್ನು ಹೆರದಿದ್ದರೆ ಸಮಾಜದಿಂದ ಮತ್ತು ಕುಟುಂಬದಿಂದ ಯಾವ ರೀತಿ ದೂಷಿಸಲ್ಪಟ್ಟು ಹಿಂಸೆಗೆ ಒಳಗಾಗುತ್ತಿದ್ದಾಳೆ ಎಂಬುದನ್ನು ತಿಳಿಯಬಹುದಾಗಿದೆ."[3]

ಪ್ರಸ್ತುತ ಸಂದರ್ಭದಲ್ಲಿ ಹೆಚ್ಚಾಗಿ ಪ್ರೇಮವಿವಾಹಗಳು ನಡೆಯುತ್ತಿರುವುದು ನಮಗೆಲ್ಲಾ ತಿಳಿದಿರುವ ವಿಷಯ. ಈ ಪ್ರೇಮ ವಿವಾಹಗಳು ಹೆಚ್ಚಾಗಿ ಅಂತರ್ ಜಾತೀಯ ವಿವಾಹಗಳಾಗಿರುತ್ತವೆ. ಈ ವಿವಾಹಗಳು ತಂದೆ ತಾಯಿಯರನ್ನು ಧಿಕ್ಕರಿಸಿ ಮಾಡಿಕೊಂಡ ವಿವಾಹಗಳಾಗಿರುತ್ತವೆ. ಹೆಚ್ಚಿನ ಪ್ರೇಮ ವಿವಾಹಗಳು ಮುರಿದು ಬಿದ್ದಿರುವಂತಹ ಘಟನೆಗಳು ನಡೆಯುತ್ತಿರುವುದು ಕಂಡು ಬರುತ್ತದೆ. ಏಕೆಂದರೆ ಅವರಲ್ಲಿನ ಸರಿಯಾದ ಹೊಂದಾಣಿಕೆ ಇಲ್ಲದಿರುವುದು ಮತ್ತು ಕೆಲವು ಸಂದರ್ಭಗಳಲ್ಲಿ ಹುಡುಗನ ತಂದೆ ತಾಯಿಗಳು ವಲ್ಲದ ಮನಸ್ಸಿನಿಂದ ಅವರಿಬ್ಬರನ್ನು ಮನೆಗೆ ಸೇರಿಸಿಕೊಂಡರೂ ಸಹ ಆ ಕುಟುಂಬದಲ್ಲಿ ಹುಡುಗಿಗೆ ಅತ್ತೆಮಾವಂದಿರಿಂದ, ನಾದಿನಿಯರಿಂದ ಪ್ರತಿನಿತ್ಯವೂ ಒಂದಲ್ಲಾ ಒಂದು ಕಾರಣಕ್ಕಾಗಿ ಜಗಳಗಳು ನಡೆಯುತ್ತಲೇ ಇರುತ್ತವೆ. ಏಕೆಂದರೆ ತಂದೆ ತಾಯಂದಿರಿಗೆ ತಮ್ಮ ಮಗನ ಭವಿಷ್ಯದ ಮೇಲೆ ತುಂಬಾ ನಿರೀಕ್ಷೆಗಳು ಇರುತ್ತವೆ. ಹಾಗಾಗಿ ಆ ನಿರೀಕ್ಷೆಗಳೆಲ್ಲವನ್ನು (ಇಲ್ಲಿ ನಿರೀಕ್ಷೆಗಳೂ ಕೂಡ ಪುರುಷ ವ್ಯವಸ್ಥೆಯ ಮೌಲ್ಯಗಳಾಗಿರುತ್ತವೆ). ಹುಸಿಮಾಡಿಬಿಡುವ ಈ ಪ್ರೇಮ ವಿವಾಹಗಳು ಮಹಿಳೆಯ ಹಿಂಸೆಗೆ ಮತ್ತೊಂದು ದಾರಿಯನ್ನು ಮಾಡಿಕೊಡುತ್ತವೆ. ಹಾಗಾಗಿ ಇಂದು ಹೆಚ್ಚಿನ ಪ್ರೇಮ ವಿವಾಹಗಳು ವಿವಾಹ ವಿಚ್ಛೇದನದಲ್ಲಿ ಕೊನೆಗೊಳ್ಳುತ್ತಿರುವುದನ್ನು ಕಾಣುತ್ತೇವೆ. ಆದರೆ ಎಲ್ಲಾ ಪ್ರೇಮ ವಿವಾಹಗಳು ವಿಚ್ಛೇದನವನ್ನು ಮಾಡಿಕೊಳ್ಳುತ್ತವೆ ಎಂದು ಹೇಳುತ್ತಿಲ್ಲ. ಯಾರಲ್ಲಿ ಹೊಂದಾಣಿಕೆಯ (ಹೊಂದಾಣಿಕೆ ಎಂಬುದೂ ಸಹ ಶೋಷಣೆಯ ಸಂಕೇತವಾಗಿದೆ)ಸಮಸ್ಯೆ ಇರುತ್ತದೋ ಅಂತಹ ವಿವಾಹಗಳು ವಿಚ್ಛೇದನ ಮಾಡಿಕೊಳ್ಳುತ್ತವೆ. ಇಲ್ಲಿಯೂ ಸಹ ಮಹಿಳೆ ಹಿಂಸೆಯಿಂದ ಹೊರಬರಲಾಗುತ್ತಿಲ್ಲ.

ದಿನನಿತ್ಯ ಪತ್ರಿಕೆಗಳಲ್ಲಿ "ಹೆಂಡತಿಯ ಶೀಲ ಶಂಕಿಸಿದ ಗಂಡನಿಂದ ಹೆಂಡತಿಯ ಸಾವು" ಎಂಬಂತಹ ಸುದ್ದಿಗಳನ್ನು ಕೇಳುತ್ತಿರುತ್ತೇವೆ. ಪಾತಿವ್ರತ್ಯ ಶ್ರೇಷ್ಠ ಮೌಲ್ಯವಾಗಿರುವ ಭಾರತೀಯ ಸಂಸ್ಕೃತಿಯಲ್ಲಿ ಅದು ಪಕ್ಷಪಾತಿಯಾದದ್ದು ಹೌದು. ಬಹುಪತ್ನಿತ್ವವು ಕಾನೂನು ಬಾಹಿರವಾದರೂ ಅದನ್ನು ಒಪ್ಪಿಕೊಂಡಿರುವ ನಮ್ಮ ಸಮಾಜದಲ್ಲಿ ಹೆಣ್ಣಿನ ಶೀಲಕ್ಕೆ ಮಾತ್ರ ದೊಡ್ಡ ಬೇಲಿಯನ್ನು ಹಾಕಲಾಗಿದೆ. ಈ ಲಕ್ಷ್ಮಣ ರೇಖೆಯನ್ನು ದಾಟಿದವರಿಗೆ ಮತ್ತು ದಾಟಿದ ಬಗ್ಗೆ ಅನುಮಾನ ಮೂಡಿದ ತಕ್ಷಣ ಅವಳನ್ನು ಕೊಚ್ಚಿ ಹಾಕಿದ ಸಂದರ್ಭಗಳು ಎಷ್ಟೋ ಇವೆ. ಹಾಗೆಯೇ ಅಂತರ್ಜಾತೀಯ ವಿವಾಹಗಳನ್ನು ಮಾಡಿಕೊಂಡು

ಎಳೆಯರನ್ನು ಕೊಚ್ಚಿಹಾಕಿದ ಸಂದರ್ಭಗಳೂ ಸಹ ಹಲವಾರಿವೆ. ನೆರೆಯ ಪಾಕಿಸ್ಥಾನದಲ್ಲಿ ನಡೆಯುತ್ತಿದ್ದ ಮರ್ಯಾದ ಹತ್ಯೆಗಳು ಭಾರತದಲ್ಲಿಯೂ ಕಾಣಿಸಿಕೊಳ್ಳುತ್ತಿವೆ. ಜಾತಿ, ಧರ್ಮ, ಕುಲ, ಗೋತ್ರ ಮುಂತಾದವುಗಳು ಇಂದಿಗೂ ಆಚರಣೆಯಲ್ಲಿದ್ದು ಇವುಗಳಿಗೆ ವಿರುದ್ಧವಾಗಿ ನಡೆದುಕೊಂಡರೆ ಹತ್ಯೆಗಳು ಸಂಭವಿಸುವುದು ಕಂಡುಬರುತ್ತದೆ. "ಕಳೆದ ಏಪ್ರಿಲ್ ೯ ರಿಂದ ಜೂನ್ ೩೦ರ ತನಕ ಮರ್ಯಾದೆ ಹತ್ಯೆಯ ೧೯ ಪ್ರಕರಣಗಳು ವರದಿಯಾಗಿವೆ. ಅದರಲ್ಲಿಯೂ ಉತ್ತರ ಭಾರತದಲ್ಲಿ ಈ ಮರ್ಯಾದೆ ಹತ್ಯೆಗಳು ಹೆಚ್ಚಾಗಿ ಸಂಭವಿಸಿವೆ"[5]. ಹಾಗಾಗಿ ಹೆಣ್ಣಿನ ಜೀವನ ಪುರುಷ ಪ್ರಧಾನ ಮೌಲ್ಯಗಳ ಅಂಕೆಯಲ್ಲಿ ಸಿಲುಕಿಕೊಂಡು ನರಳಾಡುತ್ತಿದೆ ಎಂದು ಹೇಳಬಹುದಾಗಿದೆ.

ಆಧುನಿಕತೆಯ ಪ್ರವೇಶದೊಂದಿಗೆ ಹಳ್ಳಿಗಳೆಲ್ಲವೂ ನಗರಗಳತ್ತ ಧಾವಿಸಲಾರಂಭಿಸಿವೆ. ಹಾಗಾಗಿ ಕುಟುಂಬಗಳಲ್ಲಿಯ ಹಿಂಸೆಯ ಸ್ವರೂಪಗಳು ಬೇರೆಯ ರೂಪವನ್ನು ಪಡೆಯಲಾರಂಭಿಸಿವೆ. ಇಂದು ವಿದ್ಯಾವಂತ ಕುಟುಂಬಗಳಲ್ಲಿಯೂ ಕೂಡ ವರದಕ್ಷಿಣೆಯಂತಹ ಕಿರುಕುಳಗಳು ಹೆಚ್ಚಾಗುತ್ತಲೇ ಇವೆ. ಹಾಗೆಯೇ ಅತ್ಯಚಾರ, ಲೈಂಗಿಕ ಕಿರುಕುಳಗಳೂ ಸಹ ಮಹಿಳೆಯರ ಜೀವನವನ್ನು ಹಿಂಡುತ್ತಿವೆ. ವರದಕ್ಷಿಣೆಯ ಕಾರಣಕ್ಕಾಗಿ ಮಹಿಳೆ ನಾನಾ ವಿಧದಲ್ಲಿ ಹಿಂಸೆಯನ್ನು ಅನುಭವಿಸಿ ಕೊನೆಗೆ ಸಾವಿಗೆ ಶರಣಾಗುತ್ತಿರುವ ಘಟನೆಗಳು ಹೆಚ್ಚಾಗಿ ನಡಯತ್ತಿವೆ. ಇನ್ನು ಚಿಕ್ಕ ಮಕ್ಕಳ ಲೈಂಗಿಕ ದುರ್ಬಳಕೆ. ಅತ್ಯಾಚಾರದಂತಹ ಪ್ರಕರಣಗಳು ಕುಟುಂಬದಲ್ಲಿ ಪರಿಚಿತರು, ನೆರೆಯವರು, ಸಂಬಂಧಿಗಳು, ಮನೆಯವರಿಂದಲೇ ನಡೆಯುತ್ತಿರುವುದೂ, ಕಂಡುಬರುತ್ತವೆ. ಆಧುನಿಕತೆಯ ಪ್ರವೇಶದಿಂದಾಗಿ ಹಳ್ಳಿಗಳು ನಗರ ಪ್ರದೇಶಗಳನ್ನು ಅನುಕರಿಸುತ್ತಿರುವುದು ನಿಜ. ಇದರಿಂದ ವಿಭಕ್ತ ಕಟುಂಬಗಳು ಹೆಚ್ಚಾಗಿವೆ. ಈ ವಿಭಕ್ತ ಕುಟಂಬಗಳಲ್ಲಿಯೂ ಸಹ ಪುರುಷನದೇ ಅಧಿಕಾರ ಮಹಿಳೆಯದು ಕೇವಲ ಜವಾಬ್ದಾರಿಗಳಾಗಿರುತ್ತವೆ. ಕೆಲವು ಕುಟುಂಬಗಳಲ್ಲಿ ಹಿಂಸೆ ಎಂಬುದು ಹೇಗಿರುತ್ತದೆ ಎಂದರೆ ಮನೆಯಲ್ಲಿ ಟಿ.ವಿ., ಸಿ.ಡಿಯ ಸೌಂಡ್‌ನ್ನು ಜೋರಾಗಿ ಇಟ್ಟು ಹೆಂಡತಿಯನ್ನು ಹೊಡೆಯುವ ಘಟನೆಗಳೂ ಕೂಡ ಕಂಡುಬರುತ್ತವೆ. ಏಕೆಂದರೆ ಅವಳು ಅಳುವುದು, ಚೀರುವುದು ಬೇರೆಯವರಿಗೆ ಗೊತ್ತಾಗದಿರಲಿ ಎಂದು ಹೇಳಿ ಹೊಡೆಯುತ್ತಿರುತ್ತಾರೆ. ಕುಟುಂಬದ ಹೊರಗಿನ ನಾನಾ ರೀತಿಯ ಒತ್ತಡಗಳೆಲ್ಲವನ್ನು ಕೂಡ ಹೆಂಡತಿಯ ಮೇಲೆ ಹಾಕಿ ಹಿಂಸಿಸಲಾಗುತ್ತಿದೆ. ಇದರಿಂದಲೂ ಸಹ ಮಹಿಳೆ ದೈಹಿಕವಾಗಿ ಮತ್ತು ಮಾನಸಿಕವಾಗಿ ಸಾಕಷ್ಟು ಹಿಂಸೆಯನ್ನು ಅನುಭವಿಸುತ್ತಿರುವುದು ನಮಗೆ ವೇದ್ಯವಾಗುತ್ತದೆ.

ಕಮಲಾಪುರ ಪಟ್ಟಣದಲ್ಲಿ ಅಲ್ಲಲ್ಲಿ ದೇವದಾಸಿ ಪದ್ಧತಿ ಜಾರಿಯಲ್ಲಿರುವುದು ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಬೆಳಕಿಗೆ ಬಂದಿತು. ಈ ದೇವದಾಸಿಯರ ಕುಟುಂಬಗಳಲ್ಲಿ ಹಿಂಸೆಯ ಸ್ವರೂಪ ಬೇರೆಯಾಗಿರುತ್ತವೆ. ಏಕೆಂದರೆ ಈ ದೇವದಾಸಿಯರು ಸಮಾಜದ ಕಂಗೆಣ್ಣಿಗೆ ಗುರಿಯಾಗಿ ಕುಟುಂಬಗಳಲ್ಲಿ ನಾನಾ ರೀತಿಯ ಹಿಂಸೆಗಳನ್ನು ಅನುಭವಿಸುತ್ತಿದ್ದಾರೆ. ಇವರ ಮಕ್ಕಳ ವಿದ್ಯಾಭ್ಯಾಸ ಅವರ ಭವಿಷ್ಯ ಇವುಗಳೆಲ್ಲವೂ ಸಹ ಡೋಲಾಯಮಾನವಾಗಿರುತ್ತವೆ. ಕುಟುಂಬದಲ್ಲಿ ಗಂಡುಸಂತಾನವಿರದೆ ಹೆಣ್ಣುಮಗುವೊಂದೆ ಇರುವುದಕ್ಕಾಗಿ ದೇವದಾಸಿಯರನ್ನಾಗಿ ಮಾಡಲಾಗಿದೆ. ಅಂದರೆ ಮನೆತನವನ್ನು

ಮುಂದುವರೆಸಲು ಗಂಡು ಸಂತಾನ ಬೇಕು ಆದರೆ ಹೆಣ್ಣು ಮಗು ಇರುವುದರಿಂದ ತಮ್ಮ ವಂಶ ಮುಂದುವರೆಯುವುದಕ್ಕೋಸ್ಕರ ಮನೆಗೆ ಬಿಡುವುದು ಕಂಡುಬಂದಿದೆ. ಮಹಿಳೆಯನ್ನು ದೇವರ ಹೆಸರಿನಲ್ಲಿ ಮನೆಗೆ ಬಿಡುತ್ತಾರೆ ನಿಜ. ಆದರೆ ಕುಟುಂಬದಲ್ಲಿ ಅವಳು ಅನುಭವಿಸುವ ಹಿಂಸೆ ಅಷ್ಟಿಷ್ಟಲ್ಲ. ಅದನ್ನು ಕಲ್ಪಿಸಲೂ ಸಾಧ್ಯವಿಲ್ಲ. ಏಕೆಂದರೆ ಇವರು ಒಬ್ಬ ಪುರುಷನ ಜೊತೆ ಸಂಬಂಧವನ್ನು ಇರಿಸಿಕೊಂಡು ಆ ಪುರುಷನ ಕುಟುಂಬದವರೊಂದಿಗೆ ದೇವದಾಸಿಯಾದವಳು ಒಳ್ಳೆಯ ಸಂಬಂಧವನ್ನು ಹೊಂದಿದ್ದರೆ ಆ ಮಹಿಳೆಯ ಜೀವನ ಸ್ವಲ್ಪ ಸುಖಮಯವಾಗಿರುತ್ತದೆ ಎಂದು ಹೇಳಬಹುದು. ಆದರೆ ಹೆಂಡತಿಗೆ ಮಾನಸಿಕ ಹಿಂಸೆಯಂತೂ ತಪ್ಪಿರುವುದಿಲ್ಲ. ಮುಖ್ಯವಾಗಿ ಬಹಳ ಸಂದರ್ಭಗಳಲ್ಲಿ ಈ ರೀತಿಯ ಸಂಬಂಧಗಳು ಕಂಡುಬರುವುದು ತೀರಾ ಕಡಿಮೆ. ಹೆಚ್ಚಿನದಾಗಿ ದೇವದಾಸಿ ಮಹಿಳೆಯರು ಪುರುಷನ ಕುಟುಂಬದವರ ಕಂಗೆಣ್ಣಿಗೆ ಗುರಿಯಾಗಿರುತ್ತಾರೆ. ಪುರುಷನ ಹೆಂಡತಿ ದೇವದಾಸಿ ಮಹಿಳೆ ವಾಸಿಸುವ ಮನೆಗೆ ಬಂದು ಹೀಯಾಳಿಸುವ ಪ್ರಸಂಗಗಳು ನಡೆಯುತ್ತಿವೆ. ಇದರಿಂದ ದೇವದಾಸಿ ಮಹಿಳೆ ಬಹಳಷ್ಟು ನೋವನ್ನು ಅನುಭವಿಸುತ್ತಾಳೆ. ಮತ್ತೆ ಈ ಮಹಿಳೆ ಹಲವು ಪುರುಷರೊಂದಿಗೆ ಸಂಬಂಧವನ್ನು ಇಟ್ಟುಕೊಂಡರೆ ಆಗ ಆ ಪುರುಷರೊಂದಿಗೂ ಸಹ ಹಲವಾರು ಹಿಂಸೆಗಳನ್ನು ಅನುಭವಿಸುತ್ತಾಳೆ. ಪುರುಷನು ಅವಳೊಂದಿಗೆ ಲೈಂಗಿಕ ಸಂಬಂಧವನ್ನು ಹೊಂದುವುದಕ್ಕಿಂತ ಮುಂಚೆ ಅವಳಿಗೆ ಇಷ್ಟ ಇದೆಯೇ ಅಥವಾ ಇಲ್ಲವೋ ಎಂಬುದನ್ನು ತಿಳಿಯದೆ ಅವನ ಇಚ್ಛೆಗೆ ಅನುಗುಣವಾಗಿ ಅವಳು ಸಹಕರಿಸಬೇಕು. ಇಲ್ಲವಾದರೆ ಒತ್ತಾಯ ಪೂರ್ವಕವಾಗಿ ತನ್ನ ಆಸೆಯನ್ನು ಈಡೇರಿಸಿಕೊಳ್ಳುತ್ತಾನೆ. ಇದಕ್ಕೆ ಏನನ್ನು ಬೇಕಾದರೂ ಮಾಡಲು ಹಿಂಜರಿಯುವುದಿಲ್ಲ. ಕೊನೆಗೆ ತನ್ನ ಆಸೆಯನ್ನು ಪೂರೈಸಿಕೊಂಡ ನಂತರ ಆ ದೇವದಾಸಿ ಮಹಿಳೆಯಿಂದಲೇ ಹಣವನ್ನು ಕಸಿದುಕೊಳ್ಳುತ್ತಾನೆ. ಹೀಗೆ ದೇವದಾಸಿ ಮಹಿಳೆಯರು ಹಿಂಸೆಯನ್ನು ಅನುಭವಿಸುತ್ತಲೇ ಇದ್ದಾರೆ. ಇದು ಸಾಮಾಜಿಕ ಸಮಸ್ಯೆಯಾಗಿದ್ದರೂ ಸಹ ತನ್ನ ಕುಟುಂಬದಲ್ಲಿ ಈ ರೀತಿಯ ಹಿಂಸೆಯಿಂದ ಮುಕ್ತಳಾಗಿಲ್ಲ ಎನ್ನಬಹುದು.

"ಇನ್ನು ಪಿತೃಪ್ರಧಾನ ಸಮಾಜವು ಹೆಣ್ಣು ಎಂಬ ಪದಕ್ಕೆ ಕೇವಲ ದೈಹಿಕ ನಿರ್ವಚನವನ್ನು ಮಾತ್ರ ಕೊಟ್ಟುಕೊಂಡಿರುವುದರಿಂದ ಹೆಣ್ಣಿನ ಮಾನಸಿಕ ಸ್ಥಿತಿಯ ಬಗ್ಗೆ ಅದಕ್ಕೆ ತನ್ನ ಆದರ್ಶದ ನೆಲೆಯಲ್ಲಿಯೂ ಕೂಡ ಅರಿವಿರುವುದಿಲ್ಲ. ಹಾಗಾಗಿ ಈ ಸಮಾಜವು ಸ್ತ್ರೀಯ ಸುಖ ಎಂದರೆ ಊಟ, ಬಟ್ಟೆ, ವಸತಿ, ಒಡವೆ ಇತ್ಯಾದಿ ಬೌತಿಕ ಸಂಗತಿಗಳ ಹಿನ್ನೆಲೆಯಲ್ಲಿಯೇ ಅಳೆಯುತ್ತದೆ. ಪರಿಣಾಮವಾಗಿ ಶ್ರೀಮಂತ ಕುಟುಂಬಗಳ ಹೆಣ್ಣುಗಳಿಗೂ ಕೌಟುಂಬಿಕ ಹಿಂಸೆಗೂ ನಡುವಿನ ಸಂಬಂಧಗಳು ಅರಿವಾಗುವುದಿಲ್ಲ. ಯಾವ ಕುಟುಂಬಗಳು ಹೆಣ್ಣಿನ ಭೌತಿಕ ಅಗತ್ಯವನ್ನು ಪೂರೈಸುತ್ತವೆಯೋ ಅಲ್ಲಿನ ಮಹಿಳೆ ಸುಖೀ ಎಂದು ಭಾವಿಸುತ್ತದೆ. ಆದರೆ ಎಷ್ಟೋ ಸಂದರ್ಭದಲ್ಲಿ ಬೌತಿಕ ಸರಕುಗಲು ಸ್ತ್ರೀಯನ್ನು ಅಪಾರ ಹಿಂಸೆಗೆ ಗುರಿಪಡಿಸುತ್ತಿರುತ್ತವೆ. ಆದರೆ ಕುಟುಂಬದ ಯಾವ ನೆಲೆಯಲ್ಲಿಯೂ ಸ್ತ್ರೀಗೆ ತನ್ನ ಎಚ್ಚೆಗಳನ್ನು, ನಿರ್ಧಾರಗಳನ್ನು ವ್ಯಕ್ತಪಡಿಸುವ, ಅಳವಡಿಸುವ ಅವಕಾಶವಿರುವುದಿಲ್ಲ. ಗಂಡನೊಂದಿಗೆ ಲೈಂಗಿಕ ಜೀವನವ ನಿರಾಕರಣೆಯಾಗಲಿ, ಮಕ್ಕಳನ್ನು ಹೆರುವುದರ ಬಗೆಗಿನ ಅಭಿಪ್ರಾಯವನ್ನಾಗಲೀ ಕೂಡ ಆಕೆ ವ್ಯಕ್ತಪಡಿಸುವಂತಿಲ್ಲ."[9] ಹಾಗಾಗಿ ಮಹಿಳೆ ಕೇವಲ ಪುರುಷನ ಕೈಗೊಂಬೆಯಾಗಿ ಜೀವಿಸುತ್ತಿರುವುದು ವಾಸ್ತವ ಸತ್ಯ.

"ಇಂದು ಕುಟುಂಬದಲ್ಲಿ ಹೆಂಡತಿಯ ನೋವಿನ ತಾತ್ವಿಕ ನೆಲೆಗಳನ್ನು ಸ್ಪಷ್ಟಪಡಿಸಿಕೊಳ್ಳುವುದು ಅಗತ್ಯವಿದೆ. "ಒಂದು ಇಂದ್ರಿಯ ಗಮ್ಯ ಅನುಭವವಾಗಿ ನೋವು ಅದನ್ನು ಅನುಭವಿಸುತ್ತಿರುವವರ ಹೊರೆತು ಬೇರೆ ಯಾರಿಗೂ ತಲುಪುವುದು ಸಾಧ್ಯವಿಲ್ಲ. ನೋವನ್ನು ಮತ್ತೊಬ್ಬರಿಗೆ ಸಂವಹನ ಮಾಡುವುದು ಅಸಾಧ್ಯವೆನಿಸುವಷ್ಟು ಕಷ್ಟ. ಏಕೆಂದರೆ ನೋವಿನ ವರ್ಣನೆಗೆ ಅದನ್ನು ಹಿಡಿದುಕೊಡುವ ಶಕ್ತಿ ಇರುವುದಿಲ್ಲ.... ನೋವು ಜಾಸ್ತಿಯಾದಂತೆ ಮಾತು ಕಡಿಮೆಯಾಗುತ್ತಾ ಹೋಗುವುದು. ನಿಜವಾದ ನೋವು ಮಾತನ್ನು ನಿರಾಕರಿಸುವುದು ಅಷ್ಟೇ ಅಲ್ಲ ಆ ಸಾಮರ್ಥ್ಯವನ್ನೇ ನಾಶ ಮಾಡಿ ಬಿಡುತ್ತದೆ. (ರಾಘವೇಂದ್ರರಾವ್ ಎಚ್.ಎಸ್., ೧೯೯೭, ಪುಟ.೨-೩). ನೋವುಗಳು ಪ್ರಕಟಗೊಳ್ಳುವ ಐದು ಆಯಾಮಗಳನ್ನು ಎಚ್.ಎಸ್.ರಾಘವೇಂದ್ರರಾವ್ ಅವರು ಹೀಗೆ ಗುರುತಿಸುತ್ತಾರೆ.

**ಅ. ಶಾರೀರಿಕ ನೆಲೆ:** ಹಸಿವು, ರೋಗ, ಅತಿ ಲೈಂಗಿಕತೆ, ಹಿಂಸೆ, ಅಂಗವಿಕಲತೆ ಹಾಗೂ ಮತಿ ವಿಕಲತೆಗಳ ಫಲವಾದ ದೇಹದ ನೋವುಗಳು.

**ಆ.ಮಾನಸಿಕ ನೆಲೆ:** ಭಾವನಾತ್ಮಕವಾದ ನೋವು, ಸ್ಪರ್ಧೆ, ಈರ್ಷೆ, ನಿರಾಶೆ, ಮರಣ, ಭಯ ಇತ್ಯಾದಿ.

**ಇ. ಕೌಟುಂಬಿಕ ನೆಲೆ:** ದೇಶ, ಕಾಲ, ಸಮಾಜಗಳ ಹಿನ್ನೆಲೆಯಲ್ಲಿ ಆದರೆ ಕುಟುಂಬದ ಚೌಕಟ್ಟಿನೊಳಗೆ, ಅಂತರ್ ಮನುಷ್ಯ ಸಂಬಂಧಗಳಲ್ಲಿ ಹುಟ್ಟಿಕೊಳ್ಳುವ ನೋವುಗಳು (ಸ್ತ್ರೀ ಪುರುಷ ಸಂಬಂಧದ ಸಂಕೀರ್ಣದ ನೆಲೆಗಳೂ ಸೇರಿದಂತೆ)

**ಈ. ಆರ್ಥಿಕ ಹಾಗೂ ಸಾಮಾಜಿಕ ನೆಲೆ:** ವರ್ಗ, ವರ್ಣ, ವ್ಯವಸ್ಥೆಗಳಿಂದಲೂ ಉಂಟಾದ ನಿಯಂತ್ರಿತವಾದ ಹಲವು ಬಗೆಯ ನೋವುಗಳು, ಎಲ್ಲಾ ರೀತಿಯ ಅಸಮಾನತೆ ಇದರ ಮುಖ್ಯ ಕಾರಣ.
**ಉ. ತಾತ್ವಿಕ ನೆಲೆ:** ಮನುಷ್ಯ ತನ್ನ ಬದುಕಿನ ಬಗೆಗೆ ಕೆಲವು ಮಹತ್ವದ ಪ್ರಶ್ನೆಗಳನ್ನು ಕೇಳಿಕೊಂಡು ದೊರೆಯುವ ಉತ್ತರಗಳ ಫಲವಾಗಿ ಅನುಭವಿಸುವ ನೋವು, ಮನುಷ್ಯ ಸಂಬಂಧಗಳ ಅರ್ಥಶೂನ್ಯತೆ, ಜೀವನದ ಅರ್ಥಶೂನ್ಯತೆ, ಬದಲಾವಣೆಯ ಬಗೆಗಿನ ಭ್ರಮ ನಿರಸನದ ಫಲವಾಗಿ ಯಾತನೆಗಳು ಇಲ್ಲಿ ಸೇರಿಕೊಳ್ಳುತ್ತವೆ. ಒಂದು ರೀತಿಯ ಅಸಹಾಯಕತೆ ಇಂಥ ನೋವಿಗೆ ಮುಖ್ಯ ಕಾರಣ."[25] ಹೀಗೆ ಕುಟುಂಬದಲ್ಲಿ ಹೆಂಡತಿಯಾದವಳು ಈ ಮೇಲೆ ಹೇಳಿದ ನೆಲೆಯಲ್ಲಿ ನೋವುಗಳನ್ನು ಅನುಭವಿಸುತ್ತಿರುವುದು ಕಂಡುಬರುತ್ತದೆ.

ಇಂದು ಶಿಕ್ಷಣವನ್ನು ಪಡೆದು ವಿವಿಧ ಉದ್ಯೋಗಗಳಲ್ಲಿರುವ ಮಹಿಳೆಯರು ಗ್ರಾಮೀಣ ಭಾಗದಲ್ಲಿ ಕಂಡುಬರುತ್ತಾರೆ. ಇದರಿಂದಾಗಿ ಅವರು ಮನೆಯಿಂದ ಹೊರ ಬಂದು ಉದ್ಯೋಗಗಳಲ್ಲಿ ತೊಡಗಿಕೊಂಡು ಆರ್ಥಿಕ ಸ್ವಾತಂತ್ರ್ಯವನ್ನು ಪಡೆದುಕೊಂಡಿದ್ದಾರೆಂದು ಹೇಳಲಾಗುತ್ತಿದೆಯಾದರೂ ವಾಸ್ತವದಲ್ಲಿ ಇದು ಸುಳ್ಳು. ಇವರು ದುಡಿದು ತಂದ ಹಣವನ್ನು ಗಂಡನ, ಅತ್ತೆ ಅಥವಾ ಮಾವಂದಿರ ಕೈಗೆ ಕೊಡಬೇಕು. ಇಲ್ಲವಾದರೆ ದುಡಿಯುವ ಸ್ವಾತಂತ್ರ್ಯವನ್ನು ಕಳೆದುಕೊಂಡುಬಿಡುತ್ತಾಳೆ. ಮತ್ತೆ ಕುಟುಂಬಕ್ಕೆ ಮಾತ್ರ ಸೀಮಿತವಾಗಬೇಕಾಗುತ್ತದೆ. ಹಾಗಾಗಿ ಮನೆಯಿಂದ ಹೊರಹೋಗಿ ದುಡಿಯಬಹುದು. ಆದರೆ ಅದನ್ನೇ

ಮಹಿಳೆಗೆ ಆರ್ಥಿಕ ಸ್ವಾತಂತ್ರ್ಯ ಸಿಕ್ಕಿದೆ ಎಂದು ಹೇಳಲು ಸಾಧ್ಯವಿಲ್ಲ. ಹಾಗೂ ಶಿಕ್ಷಣವನ್ನು ಪಡೆದು ಉದ್ಯೋಗದಲ್ಲಿ ತೊಡಗಿಕೊಂಡಿರುವ ಮಹಿಳೆಯರು ಕುಟಂಬದ ಕಾರ್ಯಗಳಿಂದ ಮುಕ್ತರಾಗಿಲ್ಲ. ಅವರು ಸರಕಾರಿ ಕೆಲಸದಲ್ಲಿಯೇ ಇರಲಿ ಅಥವಾ ಖಾಸಗೀ ಕೆಲಸದಲ್ಲಿಯೇ ಇರಲಿ ಮನೆಗೆಲಸಗಳನ್ನು ಕಡ್ಡಾಯವಾಗಿ ಮಾಡಲೇಬೇಕು. ಇಲ್ಲವಾದರೆ ಕುಟುಂಬದ ಸದಸ್ಯರಿಂದ ದೂಷಿಸಲ್ಪಡುತ್ತಾಳೆ. ಹೀಗೆ ಮಹಿಳೆ ಒಂದಲ್ಲಾ ಒಂದು ಕಾರಣಕ್ಕಾಗಿ ಕುಟಂಬದಲ್ಲಿ ಹಿಂಸೆಯನ್ನು ಅನುಭವಿಸುತ್ತಲೇ ಇದ್ದಾಳೆ. ಈ ಮೇಲಿನ ಕಾರಣಗಳನ್ನು ಹೊರತುಪಡಿಸಿಯೂ ಹಲವಾರು ವಿಧದಲ್ಲಿ ಹಿಂಸೆಯನ್ನು ಅನುಭವಿಸುತ್ತಿರುವುದು ಕಂಡುಬರುತ್ತದೆ. ಈ ಕುಟುಂಬ ಹಿಂಸೆಯಿಂದಾಗಿ ಮಹಿಳೆಯರ ಆರೋಗ್ಯ ತುಂಬಾ ಹದಗೆಟ್ಟಿರುವುದೂ ಸಹ ಗೋಚರಿಸುತ್ತದೆ. ಅಂದರೆ ರಕ್ತ ಹೀನತೆ, ಖಿನ್ನತೆ, ಲೈಂಗಿಕ ತೊಂದರೆಗಳು ಮುಂತಾದ ರೋಗಗಳಿಗೆ ತುತ್ತಾಗುತ್ತಿದ್ದಾಳೆ. ಅಷ್ಟೇ ಅಲ್ಲದೆ ಕುಡುಕ ಗಂಡಂದಿರಿಂದ ಕಣ್ಣುಗಳನ್ನು ಕೈ ಕಾಲುಗಳನ್ನು ಕಳೆದುಕೊಂಡವರೂ ಇರುವುದು ಕಂಡುಬರುತ್ತದೆ. ಮುಖ್ಯವಾಗಿ ಸಾಂಪ್ರದಾಯಿಕ ಮತ್ತು ಆಧುನಿಕ ಸಮಾಜಗಳೆರಡೂ ಹೆಣ್ಣನ್ನು ಪ್ರಧಾನವಾಗಿ ಗ್ರಹಿಸುವುದು ಒಂದು ದೇಹವಾಗಿ ಮಾತ್ರ. ಹಾಗಾಗಿ ಪುರುಷನ ಉಪಯುಕ್ತತೆ ಅಗತ್ಯತೆ ಹೆಣ್ಣಿನ ದೇಹದ ಆರೋಗ್ಯ ಮತ್ತು ಅನಾರೋಗ್ಯಗಳನ್ನು ನಿರ್ದೇಶಿಸುತ್ತದೆ.

ಇಂದು ಕುಟುಂಬದಲ್ಲಿ ನಡೆಯುತ್ತಿರುವ ಹಿಂಸೆಯಿಂದ ಹೆಚ್ಚಿನ ಮಹಿಳೆಯರು ಮಾನಸಿಕ ರೋಗಿಗಳಾಗಿ ಮಾರ್ಪಟ್ಟಿದ್ದಾರೆ. ಈ ಮನೋರೋಗಿಗಳು ಆಜೀವ ಪರ್ಯಂತ ರೋಗಿಯಾಗಿಯೇ ಮೂಢನಂಬಿಕೆಗಳನ್ನು ಅನುಸರಿಸಿಕೊಂಡು ಯಾತನೆಯನ್ನು ಅನುಭವಿಸಬೇಕಾಗುತ್ತದೆ. ಇಂದು ಹೆಚ್ಚಿನ ಮನರೋಗಿಗಳು ಮಹಿಳೆಯರೇ ಹೊರತು ಪುರುಷರಲ್ಲ. ಈ ಮನೋರೋಗಕ್ಕೆ ಭೂತ ಪ್ರೇತದ ಮುಖವಾಡವನ್ನು ಹಾಕಿ ಮೂಢನಂಬಿಕೆಯಲ್ಲಿ ತೊಳಲಾಡುವಂತೆ ಮಾಡಲಾಗುತ್ತಿದೆ. ಹೆಚ್ಚಿನ ಮಹಿಳೆಯರು ಕುಟುಂಬದಲ್ಲಿ ತಮಗೆ ಆಗುವಂತಹ ಹಿಂಸೆಯಿಂದಾಗಿ ಮಾನಸಿಕವಾಗಿ ಕುಗ್ಗಿ ಬಿಡುತ್ತಾರೆ. ಹಾಗಾಗಿ ಅವರು ಅವರಿಗೆ ಅರಿವಿಲ್ಲದಂತೆ ಏನೇನೋ ಮಾಡುತ್ತಿರುತ್ತಾರೆ. ಆದರೆ ನಮ್ಮ ಸಮಾಜ ಅವಳಿಗೆ ದೆವ್ವ, ಭೂತ, ಹಿಡಿದಿದೆ ಎಂದು ತಿಳಿದು ಮತ್ತೆ ಹಲವಾರು ವಿಧದಲ್ಲಿ ದೈಹಿಕವಾಗಿ ಹಿಂಸಿಸುತ್ತಾರೆ. ಕಾದ ಕಬ್ಬಿಣದಿಂದ ಬರೆ ಹಾಕುವುದು, ಮೆಣಸಿನ ಕಾಯಿ ಹೊಗೆ ಹಾಕುವುದು, ಕಸಬರಿಗೆ ಮತ್ತು ಬೇವಿನ ತಪ್ಪಲಿನಿಂದ ಹೊಡೆಯುವುದು, ದೇವಸ್ಥಾನಗಳಲ್ಲಿ ತಲೆಯ ಮೇಲೆ ಕಲ್ಲನ್ನು ಹೊರಿಸಿ ಕುಳ್ಳಿರಿಸುವುದು ಹೀಗೆ ನಾನಾ ವಿಧದಲ್ಲಿ ಚಿತ್ರ ಹಿಂಸೆಯನ್ನು ನೀಡಲಾಗುತ್ತದೆ. ಈ ವಿಧದಲ್ಲಿ ಮಹಿಳೆಯನ್ನು ಹಿಂಸಿಸುತ್ತಿರುವುದು ನಮಗೆ ಕಂಡುಬರುತ್ತದೆ.

ಇನ್ನು ಮಕ್ಕಳಾಗಲಿಲ್ಲವೆಂದು ದೇವರುಗಳಿಗೆ ಹರಕೆ ಹೊತ್ತುಕೊಳ್ಳುವುದು, ಪೂಜೆ, ಉಪವಾಸ, ಮುಂತಾದವುಗಳನ್ನು ಕೂಡ ಮಾಡುತ್ತಿರುವುದು ಕಂಡುಬರುತ್ತದೆ. ಇದರಿಂದ ಅವಳ ದೇಹದಲ್ಲಿ ಅಪೌಷ್ಟಿಕತೆ, ರಕ್ತಹೀನತೆ ಮುಂತಾದ ಸಮಸ್ಯೆಗಳಿಂದ ಬಳಲುವುದು ಕಂಡುಬರುತ್ತಿದೆ. ಮಹಿಳೆಯ ಗರ್ಭವನ್ನು ಒಂದು ಪ್ರಯೋಗಾಲಯದಂತೆ ರೂಪಿಸಿಕೊಳ್ಳಲಾಗಿದೆ. ಹೆಣ್ಣಿನ ದೇಹವು ಪುರುಷನ ವಂಶವನ್ನು ಬೆಳೆಸುವಂತಹ ಕ್ಷೇತ್ರವಾಗಿ ಪರಿಗಣಿಸಲ್ಪಟ್ಟಿದೆ. ಹಾಗಾಗಿ ಹೆಣ್ಣಿನ ಗರ್ಭಾಶಯದ ಮೇಲೆ ಹಲವು ರೀತಿಯಲ್ಲಿ ದೌರ್ಜನ್ಯಗಳು ನಡೆಯುತ್ತಲೇ ಇವೆ. ಇದರಿಂದಲೂ ಕೂಡ ಮಹಿಳೆಯ ಆರೋಗ್ಯವು ಹದಗೆಟ್ಟಿರುವುದು ಕಂಡುಬರುತ್ತದೆ.

ಒಟ್ಟಿನಲ್ಲಿ ಕುಟುಂಬದಲ್ಲಿ ಮಹಿಳೆಯ ಮೇಲೆ ನಡೆಯುತ್ತಿರುವ ಹಿಂಸೆಯು ವಿವಿಧ ಸ್ವರೂಪಗಳನ್ನು ಪಡೆದುಕೊಂಡಿದ್ದು ಆದರಿಂದ ಅನಾರೋಗ್ಯದಿಂದ ಬಳಲುತ್ತಿರುವುದು ಕಂಡುಬರುತ್ತದೆ. ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಮಹಿಳೆ ಎರಡನೇ ದರ್ಜೆಯ ಸ್ಥಾನದಲ್ಲಿದ್ದು ಪುರುಷನ ದಾಸಿಯಾಗಿ ಬದುಕುತ್ತಾ ಹಲವು ಬಗೆಯ ಕ್ರೌರ್ಯಗಳಿಗೆ ಒಳಗಾಗುತ್ತಿರುವುದನ್ನು ಈ ಮೇಲಿನ ಎಲ್ಲಾ ವಿಷಯಗಳಿಂದ ತಿಳಿಯಬಹುದಾಗಿದೆ.

**ಅಡಿಟಿಪ್ಪಣಿಗಳು**

೧. ಭಾರತೀಯ ಸ್ತ್ರೀ ಜೀವನ, ಡಾ.ವಿಠ್ಠಲರಾವ್.ಟಿ.ಗಾಯಕ್ವಾಡ್, ಪು.೧೭, ೧೮.

೨. ಮಹಿಳಾ ಅಧ್ಯಯನ, ಉತ್ತರಾಯಣ ಸಂಚಿಕೆ, ಡಾ.ಹೆಚ್.ಎಸ್.ಶ್ರೀಮತಿ(ಸಂ), ಪು.೨೭, ೨೮.

೩. ಪ್ರಜಾವಾಣಿ ದಿನಪತ್ರಿಕೆ, ಜುಲೈ ೭, ೨೦೧೦, ಪು.೮.

೪. ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು, ಡಾ.ಎಂ.ಉಷಾ. ಪು.೧೫೧.

೫. ಮಹಿಳೆ, ಶೋಷಣೆ ಸವಾಲುಗಳು, ವಿಜಯಶ್ರೀ ಸಬರದ (ಸಂ), ಪು.೫೧.

ಅಧ್ಯಾಯ ೩

# ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ಸಂರಕ್ಷಣಾ ಕಾಯ್ದೆ : ಹಿನ್ನೆಲೆ ಮತ್ತು ವಿವರ

ಬ್ರಿಟೀಷರ ಆಳ್ವಿಕೆಯ ಕಾಲದಿಂದಲೂ ಹಿಡಿದು ಭಾರತ ಸ್ವಾತಂತ್ರ್ಯವನ್ನು ಹೊಂದಿ ಸಂವಿಧಾನವನ್ನು ರಚಿಸಿ ಇಂದಿನವರೆಗೂ ಸಹ ಮಹಿಳೆಯರ ಸಂರಕ್ಷಣೆಗಾಗಿ ಹಲವಾರು ಕಾನೂನುಗಳು ಜಾರಿಗೊಳ್ಳುತ್ತಲೇ ಬಂದಿವೆ. ಮಹಿಳೆಯರಿಗೆ ಪುರುಷರಿಗೆ ಸರಿಸಮಾನವಾಗಿ ಕಂಡುಕೊಂಡಿದ್ದು, ೧೨ನೇ ಶತಮಾನದ ಬಸವಣ್ಣನ ಯುಗದಲ್ಲಿ ಎಂಬುದು ತಿಳಿದುಬರುತ್ತದೆ. ಆದರೆ ಮಹಿಳೆಯರನ್ನು ಪುರುಷರಿಗೆ ಸಮನಾಗಿ ಕಾಣಲಾಗುತ್ತಿದೆಯೇ ಎಂದರೆ ಅದಕ್ಕೆ ಉತ್ತರ ಇಲ್ಲ. ಏಕೆಂದರೆ ಮಹಿಳೆಯ ಶೋಷಣೆ ಎಂಬುದು ಇಂದು ನಿನ್ನೆಯದಲ್ಲ ಇದಕ್ಕೆ ಶತಶತಮಾನಗಳು ಇತಿಹಾಸವೇ ಇದೆ. ವ್ಯವಸ್ಥೆಯಲ್ಲಿ ಇರುವಂತಹ ತಾರತಮ್ಯವನ್ನು ಶೋಷಣೆಯನ್ನು ತೊಡೆದು ಹಾಕುವುದರ ಸಲುವಾಗಿ ೧೯ನೇ ಶತಮಾನದಲ್ಲಿಯೇ ಸಮಾಜ ಸುಧಾರಣಾ ಆಂದೋಲನಗಳು ರೂಪುಗೊಂಡವು. ಅಂದಿನ ಸಂದರ್ಭದಲ್ಲಿ ಜಾರಿಯಲ್ಲಿದ್ದ ಸತೀ ಪದ್ಧತಿ, ಬಾಲ್ಯವಿವಾಹ, ವಿಧವಾ ಪದ್ಧತಿ, ಹೆಣ್ಣು ಶಿಶು ಹತ್ಯೆಯ ಘಟನೆಗಳು ಅಂದಿನ ಸಮಾಜ ಸುದಾರಕರಾದ ರಾಜಾರಾಮ್ ಮೋಹನ್‌ರಾಯ್, ಬೆಹ್ಯಾನ್ ಮಲ್ಬಾನಿ ಮತ್ತು ರಾನಡೆ ಮುಂತಾದವರ ಸಮಾಜ ಸುಧಾರಣಾ ಪ್ರಯತ್ನಗಳಿಗೆ ಕಾರಣವಾದವು. ಈ ಎಲ್ಲಾ ಪ್ರಯತ್ನಗಳು ಸಮಾಜ ಸುಧಾರಣೆಯ ಉದ್ದೇಶದಿಂದ ಅಂದು ಚಾಲ್ತಿಯಲ್ಲಿದ್ದ ಕಾನೂನುಗಳಿಗೆ ತಿದ್ದುಪಡಿಗಳನ್ನು ತರುವ ಪ್ರಯತ್ನಗಳೇ ಆಗಿದ್ದವು. ಹಾಗಾಗಿ ಬ್ರಿಟೀಷ್ ಆಳ್ವಿಕೆಯ ಕಾಲದಲ್ಲಿ ಸತೀ ಪದ್ಧತಿಯ ರದ್ದತಿ ಅಧಿನಿಯಮ ೧೮೨೯, ಹಿಂದೂ ವಿಧವಾ ಪುನರ್ ವಿವಾಹ ಅಧಿನಿಯಮ ೧೮೫೬, ಹೆಣ್ಣು ಶಿಶು ಹತ್ಯೆ ನಿವಾರಣಾ ಅಧಿನಿಯಮ ೧೮೭೦, ಹಾಗೂ ಬಾಲ್ಯವಿವಾಹ ನಿರ್ಭಂಧ ಅಧಿನಿಯಮ ೧೯೨೯, ಈ ಎಲ್ಲಾ ಕಾನೂನುಗಳು ಜಾರಿಗೆ ಬಂದವು. ಸ್ವಾತಂತ್ರ್ಯಾ ನಂತರ ಭಾರತ ಸಂವಿಧಾನವು ಸ್ತ್ರೀ-ಪುರುಷರಿಗೆ ಸಮಾನ ಅವಕಾಶಗಳು, ಸಮಾನ ಹಕ್ಕುಗಳನ್ನು ನೀಡಿತು. ಈ ನಿಟ್ಟಿನಲ್ಲಿ ಮಹಿಳೆಯ ರಕ್ಷಣೆಗೆ ಸಂಬಂಧಿಸಿದಂತೆ ವರದಕ್ಷಿಣೆ ನಿಷೇಧ ಕಾಯ್ದೆ ೧೯೬೧, ಅತ್ಯಾಚಾರ ನಿಷೇಧ ಕಾಯ್ದೆ, ಹೆಣ್ಣು ಮಕ್ಕಳ ಅನೈತಿಕ ಮಾರಾಟ ನಿಷೇಧ ಕಾಯ್ದೆ ೧೯೫೬, ಹೆಣ್ಣು ಭ್ರೂಣ ಹತ್ಯೆ ನಿಷೇಧ ಕಾಯ್ದೆ, ಹೀಗೆ ಹಲವಾರು ಕಾನೂನುಗಳನ್ನು ರೂಪಿಸುತ್ತಾ ಜಾರಿಗೆ ತರಲಾಗಿದೆ. ಆದರೆ ಇಷ್ಟೆಲ್ಲಾ ಕಾನೂನುಗಳನ್ನು ಜಾರಿಗೆ ತಂದಿದ್ದರೂ ಸಹ ವರದಕ್ಷಿಣೆಗೆ ಸಂಬಂಧಿಸಿದಂತೆ ಆತ್ಮಹತ್ಯೆಗಳು ನಡೆಯುತ್ತಲೇ ಇವೆ. ಹಾಗೆಯೇ

ಹೆಣ್ಣು ಭ್ರೂಣ ಹತ್ಯೆಗಳು, ಅತ್ಯಾಚಾರದ ಘಟನೆಗಳು ಕೂಡ ನಡೆಯುತ್ತಲೇ ಇವೆ. ಬುದ್ಧಿವಂತ ಸಮಾಜದಲ್ಲಿಯೂ ಸಹ ಇವುಗಳ ತೀವ್ರತೆ ಹೆಚ್ಚಾಗಿರುವುದನ್ನು ನಾವು ಕಾಣುತ್ತೇವೆ. ಅತ್ಯಾಚಾರ ಲೈಂಗಿಕ ಕಿರುಕುಳಗಳಂತಹ ಘಟನೆಗಳಿಂದ ಮಹಿಳೆ ತತ್ತರಿಸಿ ಹೋಗಿದ್ದಾಳೆ. ಇವುಗಳೆಲ್ಲಕ್ಕಿಂತಲೂ ಮುಖ್ಯವಾಗಿ ಕುಟುಂಬದಲ್ಲಿ ಅನುಭವಿಸುವ ಹಿಂಸೆಯನ್ನು ಹೇಳಲಾಗದು. ಏಕೆಂದರೆ ಮಹಿಳೆಗೆ ಕುಟುಂಬದಲ್ಲಿ ಬೈಯ್ಯುವುದು ದೈಹಿಕವಾಗಿ ಹಿಂಸಿಸುವುದು, ಲೈಂಗಿಕ ಕಿರುಕುಳಗಳನ್ನು ನೀಡುವುದು, ಹೆಣ್ಣು ಭ್ರೂಣ ಹತ್ಯೆಗಳನ್ನು ಮಾಡುವುದು ಹೀಗೆ ನಾನಾ ವಿಧದಲ್ಲಿ ಹಿಂಸೆಯನ್ನು ನೀಡುತ್ತಲೇ ಬರಲಾಗಿದೆ. ಮಹಿಳೆಯ ರಕ್ಷಣೆಗೆ ಸಂಬಂಧಿಸಿದಂತೆ ಜಾರಿಗೆ ಬಂದಂತಹ ಕಾನೂನುಗಳು ಕುಟುಂಬದಲ್ಲಿ ಅನುಭವಿಸುವ ಹಿಂಸೆಯನ್ನು ಒಳಗೊಂಡಿರದೇ ಇರುವುದನ್ನು ಕಾಣಬಹುದಾಗಿದೆ. ಎಲ್ಲಾ ಕಾನೂನುಗಳು ಅಂತರ್ ಸಂಬಂಧಗಳನ್ನು ಹೊಂದಿವೆ. ನಿಜ. ಆದರೆ ಕುಟುಂಬದಲ್ಲಿ ಮಹಿಳೆಯ ಮೇಲೆ ನಡೆಯುವ ಹಿಂಸೆಯನ್ನು ತಡೆಗಟ್ಟುವಲ್ಲಿ ಇವುಗಳು ವಿಫಲವಾಗಿವೆ ಎಂದು ಹೇಳಬಹುದು. ಏಕೆಂದರೆ " ದಿನೇ ದಿನೇ ಹೆಚ್ಚುತ್ತಿರುವ ಕೌಟುಂಬಿಕ ಕ್ರೌರ್ಯವನ್ನು ನಮ್ಮ ಸಿವಿಲ್ ಕಾನೂನುಗಳು ವೈವಾಹಿಕ ಪರಿಹಾರವನ್ನು ಕ್ಲೇಮು ಮಾಡಲು ಕಾರಣವನ್ನಾಗಿ ಪರಿಗಣಿಸುತ್ತಾದರೂ ಅದನ್ನು ದಂಡನೀಯ ಅಪರಾಧವನ್ನಾಗಿ ಕ್ರಿಮಿನಲ್ ಕಾನೂನು ೧೯೮೩ರಲ್ಲಿ ತಿದ್ದುಪಡಿ ತರುವವರೆಗೂ ಪರಿಗಣಿಸಿರಲಿಲ್ಲ" ಮಹಿಳಾ ಸಂಘಟನೆಗಳೂ ಸಹ, ವಧೂದಹನ, ಅತ್ಯಾಚಾರದಂತಹ ಹಿಂಸೆಗಳಿಗೆ ನೀಡಿದಷ್ಟು ಗಮನವನ್ನು ಕೌಟುಂಬಿಕ ಹಿಂಸೆಗೆ ನೀಡಿರಲಿಲ್ಲ". ಹಾಗಾಗಿ ಇದಕ್ಕೆ ಒಂದು ಪ್ರತ್ಯೇಕವಾದ ಕಾನೂನಿನ ಅವಶ್ಯಕತೆ ಇತ್ತು. ಈ ನಿಟ್ಟಿನಲ್ಲಿ ೧೯೮೩ರಲ್ಲಿ ಭಾರತ ದಂಡ ಸಂಹಿತೆಗೆ ೪೯೮-ಎ ಪ್ರಕರಣವನ್ನು ಸೇರಿಸಿ ಮಹಿಳೆಯ ಪತಿ ಅಥವಾ ಅವನ ಸಂಬಂಧಿಗಳು ಅವಳ ಮೇಲೆ ನಡೆಸುವ ಕ್ರೌರ್ಯವನ್ನು ಅಪರಾಧ ಎಂದು ಪರಿಗಣಿಸಿತು. ಈ ಅದಿನಿಯಮವು ಹಿಂಸೆಯನ್ನು ಈ ಕೆಳಗಿನಂತೆ ಪರಿಭಾವಿಸುತ್ತದೆ.

೧. ಮಹಿಳೆಗೆ ಆಹಾರವನ್ನು ನೀಡದೇ ಹಿಂಸಿಸುವುದು.

೨. ಮಹಿಳೆಗೆ ಲೈಂಗಿಕ ಕಿರುಕುಳಗಳನ್ನು ನೀಡುವುದು.

೩. ಮಕ್ಕಳಾಗಲಿಲ್ಲವೆಂದು ಮಾನಸಿಕವಾಗಿ ಹಿಂಸಿಸುವುದು.

೪. ದೈಹಿಕವಾಗಿ ಶೋಷಿಸುವುದು.

೫. ಮಹಿಳೆಯ ಶೀಲವನ್ನು ಶಂಕಿಸುವುದರ ಮೂಲಕ ಚುಚ್ಚು ಮಾತುಗಳನ್ನಾಡುವುದು, ಮೊದಲಿಸುವುದು ಇದರಿಂದ ಮಾನಸಿಕವಾಗಿ ಹಿಂಸೆ ನೀಡುವುದು.

೬. ಮನೆಯ ಹೊರಗಿನ ಸಾಮಾಜಿಕ ಸ್ಥಾನಮಾನಗಳಿಗೆ ಧಕ್ಕೆ ಬರುವಂತೆ ಮಾಡುವುದು.

೭. ತಾಯಿಯಿಂದ ಮಕ್ಕಳನ್ನು ದೂರ ಮಾಡುವುದು ಅಥವಾ ಮಕ್ಕಳನ್ನು ಕೆಟ್ಟಾದಾಗಿ ನೋಡಿ ಕೊಳ್ಳುವುದರ ಮೂಲಕ ಹಿಂಸಿಸುವುದು.

೮. ಕುಟುಂಬದಲ್ಲಿ ಮಹಿಳೆಯರನ್ನು ಆತ್ಮಹತ್ಯೆಗೆ ತಳ್ಳುವಂತಹ ವಿಷಯಗಳು.

ಇವುಗಳಲ್ಲೆವೂ ಕೂಡ ೪೯೮-ಎರ ಪ್ರಕರಣದಡಿಯಲ್ಲಿ ಹಿಂಸೆ ಎಂದು ಗುರುತಿಸಿಕೊಂಡಿವೆ. ಆದರೆ ೧೯೮೩ರಲ್ಲಿಯೇ ಈ ಅಧಿನಿಯಮ ಜಾರಿಗೆ ಬಂದಿದ್ದರೂ ಸಹ ಅಂದಿನಿಂದ ಇಂದಿನವರೆಗೂ ಮಹಿಳೆ ಕೌಟುಂಬಿಕ ಹಿಂಸೆಯಿಂದ ಮುಕ್ತಳಾಗಿಲ್ಲ ಎಂದು ಹೇಳಬಹುದು. ಮತ್ತು ಈ ಪ್ರಕರಣ ಕೆಲವು ಲೋಪದೋಷಗಳನ್ನು ಹೊಂದಿರುವುದು ಕಂಡುಬಂದಿದೆ. ಎಲ್ಲಾ ಬಗೆಯ ಕೌಟುಂಬಿಕ ಹಿಂಸೆ ಹಾಗೂ ಕ್ರೌರ್ಯದ ಕೃತ್ಯಗಳು ೪೯೮-ಎ ಪ್ರಕರಣದ ಅಡಿಯಲ್ಲಿ ದಂಡನೀಯ ಅಪರಾಧಗಳು. ಆದರೆ ಈ ಪ್ರಕರಣವನ್ನು ಹೆಚ್ಚುತ್ತಿರುವ ವರದಕ್ಷಿಣೆ ಸಾವು, ವರದಕ್ಷಿಣೆ ಕಿರುಕುಳದಿಂದಾಗಿ ಮಾಡಿಕೊಳ್ಳುವ ಆತ್ಮಹತ್ಯೆ ಹಾಗೂ ವರದಕ್ಷಿಣೆ ಕಿರುಕುಳಗಳ ಸಂಬಂಧದಲ್ಲಿ ಜಾರಿಗೊಳಿಸಿದುದರಿಂದಾಗಿ ವರದಕ್ಷಿಣೆಗೆ ಸಂಬಂಧಪಡದ ಕೌಟುಂಬಿಕ ಹಿಂಸೆಯ ಕೃತ್ಯಗಳ ಬಗೆಗಿನ ದೂರಗಳನ್ನು ದಾಖಲು ಮಾಡಿಕೊಳ್ಳಲು ಸಹ ಪೋಲೀಸರು ಪ್ರಾರಂಭದಲ್ಲಿ ಸಿದ್ಧರಿರಲಿಲ್ಲ. ಈ ಪ್ರಕರಣದಲ್ಲಿ ಎಲ್ಲಿಯೂ ವರದಕ್ಷಿಣೆ ಎಂಬ ಪದವನ್ನು ಬಳಸಿಲ್ಲ ಎಂಬುದು ಮತ್ತು ಗಾಯಕ್ಕೆ ಸಂಬಂಧಿಸಿದಂತೆ ತೀವ್ರ ಗಾಯ ಎಂದು ಬಳಸಿರುವುದರಿಂದ ಬಹುಪಾಲು ಮಹಿಳೆಯರು ದಿನನಿತ್ಯ ಎದುರಿಸುತ್ತಿರುವ ಸಾಮಾನ್ಯ ಹಿಂಸೆಗಳು ಈ ಪರಿಧಿಯಿಂದ ಹೊರಗೇ ಉಳಿದುಬಿಡುತ್ತವೆ. ಹಾಗೆಯೇ ಭಾರತ ದಂಡ ಸಂಹಿತೆಯ ೪೯೮ನೇ ಪ್ರಕರಣ ವಿವಾಹಿತ ಸ್ತ್ರೀಯನ್ನು ಅಪರಾಧಿಕ ಉದ್ದೇಶದಿಂದ ಪುಸಲಾಯಿಸುವುದು ಅಥವಾ ಕರೆದುಕೊಂಡು ಹೋಗುವುದನ್ನು ಅಪರಾಧವನ್ನಾಗಿಸುತ್ತದೆ. ಈ ಪ್ರಕರಣ, ಯಾರೇ ವ್ಯಕ್ತಿ ತನ್ನ ಪತ್ನಿಯನ್ನು ಕರೆದೊಯ್ದರೆ, ಪತ್ನಿಯ ಒಪ್ಪಿಗೆ ಇದ್ದು ಹಾಗೆ ಕರೆದೊಯ್ದ ವ್ಯಕ್ತಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳಲು ಪತಿ ಹಕ್ಕು ಹೊಂದಿರುತ್ತಾನೆ. ಮತ್ತು ೪೯೭ನೇ ಪ್ರಕರಣ ತನ್ನ ಪತ್ನಿಯ ವ್ಯಭಿಚಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳಲು ಪತಿಗೆ ಹಕ್ಕು ನೀಡುತ್ತದೆ. ಆದರೆ ತನ್ನ ಇತರ ಮಹಿಳೆಯೊಡನೆ ವ್ಯಭಿಚಾರ ನಡೆಸಿದ ಪತಿಯ ವಿರುದ್ಧ ಕ್ರಮ ಕೈಗೊಳ್ಳಲು ಸಹ ಪತ್ನಿಗೆ ಯಾವುದೇ ಹಕ್ಕು ನೀಡುವುದಿಲ್ಲ. ಹೀಗೆ ಇಷ್ಟೆಲ್ಲಾ ಸಂಗತಿಗಳನ್ನು ಮತ್ತು ಲೋಪಗಳನ್ನು ಹೊಂದಿರುವ ೪೯೮-ಎ ಪ್ರಕರಣದಡಿಯಲ್ಲಿ ಮಹಿಳೆ ಕೌಟುಂಬಿಕ ಹಿಂಸೆಗೆ ಸಂಬಂಧಿಸಿದಂತೆ ಯಾವುದೇ ರೀತಿಯ ನ್ಯಾಯವನ್ನು ಪಡೆಯುವಲ್ಲಿ ವಿಫಲಳಾಗಿದ್ದಳು. ಹಾಗಾಗಿ ಕುಟುಂಬದಲ್ಲಿಯ ಮಹಿಳೆಯ ಮೇಲಿನ ಹಿಂಸೆಯನ್ನು ಶಾಶ್ವತವಾಗಿ ತಡೆಗಟ್ಟಬೇಕು ಮತ್ತು ಕೌಟುಂಬಿಕ ಹಿಂಸೆಯನ್ನು ಒಂದು ಅಪರಾದ ಎಂದು ಪರಿಗಣಿಸುವ ನಿಟ್ಟಿನಲ್ಲಿ ಒಂದು ಪ್ರತ್ಯೇಕವಾದ ಕಾನೂನಿನ ಅವಶ್ಯಕ ಇತ್ತು ಹಾಗಾಗಿ ೨೦೦೫ರಲ್ಲಿ ಒಂದು ಕಾನೂನನ್ನು ರಚಿಸಲಾಯಿತು ಅದೇ "ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ಸಂರಕ್ಷಣಾ ಅಧಿನಿಯಮ". ಈ ನಿಯಮದ ಸಂಪೂರ್ಣವಾದ ಮಾಹಿತಿಯನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

**ಕಾಯಿದೆಯ ಸಂಪೂರ್ಣ ವಿವರ**

ಕೇಂದ್ರ ಸರಕಾರವು ದಿನಾಂಕ ೨೬.೧೦.೨೦೦೬ರಂದು "ಕೌಟುಂಬಿಕ ದೌರ್ಜನ್ಯದಿಂದ ಮಹಿಳೆಯರ ಸಂರಕ್ಷಣಾ ಕಾಯ್ದೆ"ಯನ್ನು ಜಾರಿಗೆ ತಂದಿತು. ಈ ಕಾಯಿದೆಯ ಪ್ರಕಾರ ಕೌಟುಂಬಿಕ ಹಿಂಸೆ ಎಂದರೆ "ಕುಟುಂಬದಲ್ಲಿ ಮಹಿಳೆಯ ಮೇಲೆ ದಿನ ನಿತ್ಯ ತನ್ನ ಗಂಡನಿಂದ ಅಥವಾ ಗಂಡನ ಸಂಬಂಧಿಕರಿಂದ ಅಂದರೆ ಅತ್ತೆ, ಮಾವ, ನಾದಿನಿ, ತಂದೆ ಹಾಗೂ ಸಹೋದರ ಇತ್ಯಾದಿಯವರಿಂದ ನಡೆಯುವ ಅಥವಾ

ನಡೆಯುತ್ತಿರುವ ದೌರ್ಜನ್ಯವಾಗಿದೆ". ಇದನ್ನು ಇನ್ನೊಂದು ರೀತಿಯಲ್ಲಿ ಹೇಳುವುದಾದರೆ "ಕುಟುಂಬದಲ್ಲಿ ಮಹಿಳೆಗೆ ಮಾನಸಿಕ ಅಥವಾ ದೈಹಿಕ ನೋವನ್ನುಂಟು ಮಾಡುವ ಅಥವಾ ಆಕೆಯ ಬದುಕು ಇಲ್ಲವೆ ಭದ್ರತೆಗೆ ಘಾಸಿಯನ್ನುಂಟು ಮಾಡುವ ಕೃತ್ಯಗಳನ್ನು ಕೌಟುಂಬಿಕ ಹಿಂಸೆ ಎಂದು ಕರೆಯಲಾಗುತ್ತದೆ".

ಈ ಕಾಯಿದ್ದೆಯಲ್ಲಿ ಬಾಧಿತ/ನೊಂದ ವ್ಯಕ್ತಿ ಎಂದರೆ ಹೆಂಡತಿ, ಮಗಳು, ಸಹೋದರಿ, ವಿಧವೆ, ಎರಡನೇ ಹೆಂಡತಿ, ದತ್ತಕ ಮಗು, ಗಂಡ-ಹೆಂಡತಿಯ ಹಾಗೆ ಜೀವಿಸಿದವರು ಹಾಗೂ ಜೀವಿಸುವವರು. ಇವರೆಲ್ಲರನ್ನೂ ಬಾಧಿತ ವ್ಯಕ್ತಿ ಎಂದು ಕರೆಯಲಾಗಿದೆ. ಹಾಗೆಯೇ ಗಂಡನೊಂದಿಗೆ ವಾಸಿಸಿ ಅವನಿಗೆ ಲೈಂಗಿಕ ಸುಖ ನೀಡುತ್ತಾ ಬಂದಿರುವ ಹೆಣ್ಣು ನಂತರ ಆತನಿಂದ ಪರಿತ್ಯಕ್ತಳಾದರೆ ಅಂತಹವಳು ಈ ಕಾಯ್ದೆಯಡಿಯಲ್ಲಿ ದೂರು ಸಲ್ಲಿಸಬಹುದು.

ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ಸಂರಕ್ಷಣಾ ಕಾಯ್ದೆಯು ಒಟ್ಟು ೫ ಅಧ್ಯಾಯಗಳನ್ನು ಒಳಗೊಂಡಿದೆ. ಮೊದಲನೆಯ ಅಧ್ಯಾಯದಲ್ಲಿ ಎರಡು ಕಲಮುಗಳು, ಎರಡನೇ ಅಧ್ಯಾಯದಲ್ಲಿ ೩ ಕಲಮುಗಳು ಇದ್ದು ಸಾವು ಕೌಟುಂಬಿಕ ದೌರ್ಜನ್ಯದ ಅರ್ಥವಿವರಣೆಯನ್ನು ನೀಡುತ್ತವೆ. ಮೂರನೇ ಅಧ್ಯಾಯದಲ್ಲಿ ಕಲಮುಗಳು ನಾಲ್ಕರಿಂದ ಹನ್ನೊಂದನ್ನು ಒಳಗೊಂಡಿದೆ. ನಾಲ್ಕನೇ ಅಧ್ಯಾಯವು ಕಲಮು ೧೨ರಿಂದ ೨೮ನ್ನು ಒಳಗೊಂಡಿದ್ದು, ಕೊನೆಯ ೫ನೇ ಅಧ್ಯಾಯವು ೩೦ರಿಂದ ೩೭ರವರೆಗೆ ಕಲಮುಗಳನ್ನು ಒಳಗೊಂಡಿರುತ್ತದೆ. ಈ ಎಲ್ಲಾ ಅಧ್ಯಾಯಗಳನ್ನು ಒಂದೊಂದಾಗಿ ಈ ಕೆಳಗಿನಂತೆ ವಿವರಿಸಲಾಗಿದೆ.

## ಅಧ್ಯಾಯ ಒಂದು

**ಕಲಮು ೧. ಶೀರ್ಷಿಕೆ ವ್ಯಾಪ್ತಿ ಮತ್ತು ಜಾರಿ.**

೧. ಈ ಕಾಯ್ದೆಯನ್ನು ಕೌಟುಂಬಿಕ ದೌರ್ಜನ್ಯದಿಂದ ಮಹಿಳೆಯನ್ನು ರಕ್ಷಿಸುವ ಕಾಯ್ದೆ ೨೦೦೫, ಎಂದು ಕರೆಯಲಾಗುವುದು.

೨. ಕಾಯ್ದೆಯು ಜಮ್ಮು ಮತ್ತು ಕಾಶ್ಮೀರ ರಾಜ್ಯವನ್ನು ಹೊರತುಪಡಿಸಿ ಭಾರತದಾದ್ಯಂತ ವಿಸ್ತರಿಸಲ್ಪಡುತ್ತದೆ.

೩. ಇದು ಕೇಂದ್ರ ಸರಕಾರವು ಅಧಿಸೂಚನೆಯ ಮೂಲಕ ಹೊರಡಿಸಲ್ಪಡುವ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**ಕಲಮು ೨. ಪರಿಭಾಷೆಗಳು**

ಎ. "ಭಾದಿತ ವ್ಯಕ್ತಿ" ಎಂದರೆ ಯಾವುದೇ ಮಹಿಳೆ ಎದುರುದಾರನ (ಪ್ರತಿವಾದಿಯ) ಜೊತೆಯಲ್ಲಿ ಗೃಹ ಕೃತ್ಯಕ್ಕೆ ಸಂಬಂಧಪಟ್ಟವಳಾಗಿರುವಳೋ ಮತ್ತು ಎದುರುದಾರನಿಂದ ಗೃಹ ಕೃತ್ಯದ ಹಿಂಸೆಯ ಯಾವುದೇ ಕೃತ್ಯಗಳಿಗೆ ಒಳಗಾಗಿದ್ದೇನೆಂದು ಆಪಾದಿಸುವವಳು.

ಬಿ. ಮಗು ಎದರೆ ೧೮ ವರ್ಷದ ಕೆಳಗಿನ ಯಾವುದೇ ವ್ಯಕ್ತಿ ಮತ್ತು ಯಾವುದೇ ದತ್ತಕ, ಮಲ ಮಗು ಅಥವಾ ಸಾಕುಮಗು.

ಸಿ. "ನಷ್ಟ ಪರಿಹಾರ ಆದೇಶ" ಅಂದರೆ ಕಲಮು ೨೨ರ ಅಡಿಯಲ್ಲಿ ಹೊರಡಿಸಲಾದ ಆದೇಶ.

ಡಿ. "ಅಭಿರಕ್ಷೆಯ ಆದೇಶ" ಎಂದರೆ ಕಲಮು ೨೧ರ ಅಡಿಯಲ್ಲಿ ಕೊಡಲಾದ ಆದೇಶ.

ಇ. "ಕೌಟುಂಬಿಕ ಘಟನಾವರದಿ (ಡಿಐಆರ್) ಎಂದರೆ ಭಾದಿತ ವ್ಯಕ್ತಿಯಿಂದ ಕೌಟುಂಬಿಕ ದೌರ್ಜನ್ಯದ ಬಗ್ಗೆ ಪಡೆಯಲಾದ ದೂರಿನ ನಂತರ ನಿಗದಿತ ನಮೂನೆಯಲ್ಲಿ ತಯಾರಿಸಲಾದ ವರದಿ.

ಕೌಟುಂಬಿಕ ಘಟನಾ ವರದಿಯು ಕೌಟುಂಬಿಕ ಹಿಂಸೆಯಿಂದ ಮಹಿಳೆಯರನ್ನು ಸಂರಕ್ಷಿಸುವ ನಿಯಮದ ನಮೂನೆ ೧ರಂತೆ ಇರತಕ್ಕದ್ದು ಮತ್ತು ಅದನ್ನು ಸಂರಕ್ಷಕ ಅಧಿಕಾರಿ ಸೇವೆ ಒದಗಿಸುವ ಅಥವಾ ವೈದ್ಯಕೀಯ ಸೇವೆಯ ಉಸ್ತುವಾರಿ ವ್ಯಕ್ತಿ ತಯಾರಿಸಬೇಕು ಹಾಗೂ ಅದನ್ನು ಘಟನೆ ನಡೆದ ಸ್ಥಳ ವ್ಯಾಪ್ತಿಯ ಪೋಲಿಸ್ ಠಾಣೆ ಮತ್ತು ಮ್ಯಾಜಿಸ್ಟ್ರೇಟರಿಗೆ ರವಾನಿಸಬೇಕು.

ಎಫ್. "ಕೌಟುಂಬಿಕ ಸಂಬಂಧ" ಎಂದರೆ ಎರಡು ವ್ಯಕ್ತಿಗಳ ನಡುವಿನ ಸಂಬಂಧ. ಮದುವೆಯಾದ ಹೆಂಡತಿ, ರಕ್ತ ಸಂಬಂಧ ಹೊಂದಿರುವವರು, ತಾಯಿ, ಸಹೋದರಿ, ಮಗಳು, ವಿಧವೆ, ದತ್ತಕ ಮಗು, ಅವರು ಆಶ್ರಿತ ಮನೆಯಲ್ಲಿ ಅವರು ಯಾವುದೇ ಘಳಿಗೆಯಲ್ಲಿ ವಾಸಿಸಿರಲಿ ಅಥವಾ ವಾಸಿಸಲಿ ಇತರೆ ಸಂಬಂಧಗಳು, ಎರಡನೇ ಮದುವೆ ಹಾಗೂ ಇತರೆ ಸಂಬಂಧದ ರೀತಿಯಲ್ಲಿ ವಾಸ.

ಜಿ. "ಕೌಟುಂಬಿಕ ಹಿಂಸೆ" ಎಂಬುದು ಕಲಮು ೩ರಲ್ಲಿ ವಿವರಿಸಲಾದ ಅರ್ಥವನ್ನೇ ಹೊಂದಿರುತ್ತದೆ.

ಎಚ್. "ವರದಕ್ಷಿಣೆ" ಎಂಬುದು ವರದಕ್ಷಿಣೆ ನಿಷೇಧ ಅಧಿನಿಯಮ ೧೯೬೧ರ ೩ನೇ ಕಲಮಿನಲ್ಲಿ ಗೊತ್ತುಪಡಿಸಲಾದ ಅರ್ಥವನ್ನು ಹೊಂದಿರತಕ್ಕದ್ದು.

ಐ. "ದಂಡಾಧಿಕಾರಿ" ಎಂದರೆ ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿ, ಮಹಾನಗರ ಪಾಲಿಕೆಯ ದಂಡಾಧಿಕಾರಿ ಅಥವಾ ದಂಡಾಧಿಕಾರಿ ಎಂದರೆ ಬಾಧಿತ ವ್ಯಕ್ತಿಯ ತಾತ್ಕಾಲಿಕವಾಗಿ ವಾಸಿಸುವ ಅಥವಾ ಪ್ರತಿವಾದಿಯು ವಾಸಿಸುವ ಅಥವಾ ಕೌಟುಂಬಿಕ ಹಿಂಸೆ ಜರುಗಿದೆ ಎಂದು ಅಪಾಧಿಸಲಾದ ಪ್ರದೇಶದಲ್ಲಿ, ದಂಡ ಪ್ರಕ್ರಿಯಾ ಸಂಹಿತೆ, ೧೯೭೩ರ ಅಡಿಯಲ್ಲಿ ಅಧಿಕಾರ ವ್ಯಾಪ್ತಿ ಚಲಾಯಿಸುತ್ತಿರುವ ಪ್ರಥಮ ದರ್ಜೆಯ ಜ್ಯೂಡಿಷಿಯಲ್ ಮ್ಯಾಜಿಸ್ಟ್ರೇಟ್ (ನ್ಯಾಯಿಕ ದಂಡಾಧಿಕಾರಿ) ಅಥವಾ ಸಂದರ್ಭಾನುಸಾರವಾಗಿ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ (ಮಹಾನಗರ ಪಾಲಿಕೆ ದಂಡಾಧಿಕಾರಿ).

ಜೆ. "ವೈದ್ಯಕೀಯ ಸೌಲಭ್ಯ" ಎಂದರೆ ಈ ಕಾಯ್ದೆಯ ಉದ್ದೇಶಕ್ಕಾಗಿ ರಾಜ್ಯ ಸರಕಾರವು ಅಧಿಸೂಚನೆಯ ಮೂಲಕ ಹೊರಡಿಸಬಹುದಾದಂತಹ ಸೌಲಭ್ಯ.

ಕೆ. "ಆರ್ಥಿಕ ಪರಿಹಾರ" ಎಂದರೆ ಕೌಟುಂಬಿಕ ಹಿಂಸೆಯ ಪರಿಣಾಮವಾಗಿ ಬಾಧಿತ ವ್ಯಕ್ತಿಯು ಅನುಭವಿಸಿದ

ನಷ್ಟಗಳನ್ನು ಹಾಗೂ ಮಾಡಿದ ವೆಚ್ಚಗಳನ್ನು ಭರಿಸಲು ಈ ಅಧಿನಿಯದಡಿಯಲ್ಲಿ ಪರಿಹಾರ ಕೋರಿ ಸಲ್ಲಿಸಲಾದ ಅರ್ಜಿಯ ಸುನಾವಣೆಯ (ಆಲಿಸುವ) ಯಾವುದೇ ಹಂತದಲ್ಲಿ ಮ್ಯಾಜಿಸ್ಟ್ರೇಟರು ಬಾಧಿತ ವ್ಯಕ್ತಿಗೆ ಪ್ರತಿವಾದಿಯು ಕೊಡಬೇಕೆಂದು ಆದೇಶಿಸಬಹುದಾದ ನಷ್ಟ ಪರಿಹಾರ.

ಎಲ್. "ಅಧಿಸೂಚನೆ" ಎಂದರೆ ಸರಕಾರಿ ರಾಜಪತ್ರದಲ್ಲಿ (ಗೆಜೆಟ್) ಪ್ರಕಟಿಸಲಾದ ಅಧಿಚೂನೆ ಹಾಗೂ "ಅಧಿಸೂಚಿತ" ಎಂಬ ಪದವನ್ನು ತದನುಸಾರವಾಗಿ ಅರ್ಥೈಸುವುದು.

ಎಮ್. "ನಿಗದಿಪಡಿಸಿದ" ಎಂದರೆ ಈ ಕಾಯ್ದೆಯ ಅಡಿಯಲ್ಲಿ ನಿಗದಿಪಡಿಸಲಾದ ನಿಯಮಗಳ ಅಡಿಯಲ್ಲಿ ಮಾಡಲಾದಂತೆ.

ಎನ್. "ಸಂರಕ್ಷಕ ಅಧಿಕಾರಿ" ಎಂದರೆ ೮ನೇ ಕಲಮಿನ, ಉಪಕಲಮು (೧)ರ ಅಡಿಯಲ್ಲಿ ರಾಜ್ಯ ಸರಕಾರವು ನೇಮಿಸಿದ ಒಬ್ಬ ಅಧಿಕಾರಿ.

ಓ. "ಸಂರಕ್ಷಣ ಆದೇಶ" ಎಂದರೆ ಕಲಮು ೧೮ರಲ್ಲಿ ತಿಳಿಸಲಾದ ಆದೇಶ.

ಪಿ. "ವಾಸದ ಆದೇಶ" ಎಂದರೆ ಕಲಮು ೧೯, ಉಪಕಲಮು (೧)ರಂತೆ, ಮಂಜೂರು ಮಾಡಲಾದ ಆದೇಶ.

ಕ್ಯೂ. "ಪ್ರತಿವಾದಿ" ಎಂದರೆ ಬಾಧಿತ ವ್ಯಕ್ತಿಯೊಂದಿಗೆ ಕೌಟುಂಬಿಕ ಸಂಬಂಧದಲ್ಲಿರುವ ಅಥವಾ ಸಂಬಂಧದಲ್ಲಿದ್ದ ಹಾಗೂ ಈ ಅಧಿನಿಯಮದಡಿಯಲ್ಲಿ ಬಾಧಿತ ವ್ಯಕ್ತಿಯು ಯಾರ ವಿರುದ್ಧ ಯಾವುದೇ ಪರಿಹಾರ ಕೋರಿದ್ದಾಳೋ, ಅಂಥ ಯಾವುದೇ ವಯಸ್ಕ ಪುರುಷನು.

ಆರ್. "ಸೇವೆ ಒದಗಿಸುವವ" ಎಂದರೆ ಕಲಮು ೧೦ರ ಉಪಕಲಮು (೧)ರಅಡಿಯಲ್ಲಿ ನೊಂದಾಯಿಸಲಾದ ಅಂಗಸಂಸ್ಥೆ.

ಎಸ್. ಸಹಭೋಗದ ಮನೆ ಹಂಚಿಕೊಂಡು ಬಾಳಿದ ಮನೆ ಎಂದರೆ ಬಾಧಿತ ವ್ಯಕ್ತಿಯ ಒಬ್ಬಳೇ ಆಗಲಿ ಅಥವಾ ಪ್ರತಿವಾದಿಯೊಂದಿಗೆ ಆಗಲಿ ಕೌಟುಂಬಿಕ ಸಂಬಂಧದಲ್ಲಿ ವಾಸಿಸುತ್ತಿರುವ ಅಥವಾ ಯಾವುದೇ ಹಂತದಲ್ಲಿ ವಾಸಿಸಿದ ಒಂದು ಸಹಭೋಗದ ಮನೆ ಮತ್ತು ಬಾಧಿತ ವ್ಯಕ್ತಿ ಹಾಗೂ ಪ್ರತಿವಾದಿಯು ಜಂಟಿಯಾಗಿ ಒಡೆತನ ಹೊಂದಿದ ಅಥವಾ ಗೇಣಿದಾರಿಕೆ ಹೊಂದಿದ್ದ ಒಂದು ಮನೆ ಅಥವಾ ಬಾಧಿತ ವ್ಯಕ್ತಿಯಾಗಲೀ ಅಥವಾ ಪ್ರತಿವಾದಿಯಾಗಲಿ ಯಾರಾದರೊಬ್ಬರು ಅಥವಾ ಜಂಟಿಯಾಗಿ ಅಥವಾ ಒಬ್ಬರೇ ಯಾವುದೇ ಹಕ್ಕು, ಸ್ವಾಮ್ಯ, ಹಿತಾಸಕ್ತಿ ಅಥವಾ ಸಮನ್ಯಾಯ ಹಕ್ಕು ಹೊಂದಿದ ಮನೆಯನ್ನು ಒಳಗೊಳ್ಳುತ್ತದೆ. ಮತ್ತು ಸಹಬೋಗದ ಮನೆ ಎಂಬುದರಲ್ಲಿ ಪ್ರತಿವಾದಿಯು ಅಥವಾ ಬಾಧಿತ ವ್ಯಕ್ತಿಯ ಯಾವುದೇ ಹಕ್ಕು ಸ್ವಾಮ್ಯ ಅಥವಾ ಹಿತಾಸಕ್ತಿಯನ್ನು ಹೊಂದಿದ್ದಾನೆಯೋ ಇಲ್ಲವೋ ಎಂಬುದನ್ನು ಗಣನೆಗೆ ತೆಗೆದುಕೊಳ್ಳದೇ ಪ್ರತಿವಾದಿಯು ಸದಸ್ಯನಾಗಿರುವ ಏಕತ್ರ ಕುಟುಂಬಕ್ಕೆ ಸೇರಬಹುದಾದ ಅಂಥ ಮನೆಯನ್ನು ಒಳಗೊಳ್ಳುತ್ತದೆ.

ಟಿ. "ಆಸರೆ ಗೃಹ ರಕ್ಷಣೆಯ ಮನೆ" ಎಂದರೆ ರಾಜ್ಯಸರಕಾರದಿಂದ ಈ ಕಾಯ್ದೆ ಉದ್ದೇಶಕ್ಕಾಗಿ ಅಧಿಸೂಚನೆ ಹೊರಡಿಸಲಾದ ವಾಸಸ್ಥಾನ.

## ಅಧ್ಯಾಯ ೩

## ಕೌಟುಂಬಿಕ ಹಿಂಸೆ

**ಕಲಮು ೩. ಕೌಟುಂಬಿಕ ಹಿಂಸೆಯ ಪರಿಭಾಷೆ**

ಈ ಕಾಯ್ದೆ ಉದ್ದೇಶಕ್ಕಾಗಿ ಯಾವುದೇ ಕಾರ್ಯ ಕರ್ತವ್ಯ ಲೋಪ ಅಥವಾ ಪ್ರತಿವಾದಿಯ ನಡತೆಯ ಕೌಟುಂಬಿಕ ಹಿಂಸೆಯನ್ನು ಬಿಂಬಿಸತಕ್ಕದ್ದು. ಅವುಗಳೆಂದರೆ.

ಅ. ಬಾಧಿತ ವ್ಯಕ್ತಿಗೆ ದೈಹಿಕವಾಗಿ ಅಥವಾ ಮಾನಸಿಕವಾಗಿ ಕಿರುಕುಳ ನೀಡುವುದು, ಗಾಯಗೊಳಿಸುವುದು, ಸುರಕ್ಷತೆಗೆ ಧಕ್ಕೆ ಒದಗಿಸುವುದು, ಆರೋಗ್ಯಕ್ಕೆ ಅಪಾಯ ಒದಗಿಸುವುದು, ದೈಹಿಕವಾಗಿ ನಿಂಧಿಸುವುದು, ಕಾಮೋತ್ತೇಜನೆಗೆ ನಿಂದಿಸುವುದು, ಮತ್ತು ಆರ್ಥಿಕ ನಿಂದನೆ ಅಥವಾ.

ಬ. ಬಾಧಿತ ವ್ಯಕ್ತಿಗೆ ಕಿರುಕುಳ ನೀಡುವುದು, ಧಕ್ಕೆ ಒದಗಿಸುವುದು, ಗೋಳಾಡಿಸುವುದು, ಭಯಗೊಳಿಸುವುದು ಅಥವಾ ಅವಳಿಗೆ ಅಥವಾ ಅವಳಿಗೆ ಸಂಬಂಧಿಸಿದ ವ್ಯಕ್ತಿಯನ್ನು ಕುರಿತು ವರದಕ್ಷಿಣೆ ಹಣ ನೀಡುವಂತೆ ಬಲವಂತವಾಗಿ ಒತ್ತಾಯಿಸುವುದು ಅಥವಾ ಆಸ್ತಿ ಅಥವಾ ಬೆಲೆಯುಳ್ಳ ಭದ್ರತೆಯನ್ನು ನೀಡುವಂತೆ ಒತ್ತಾಯಿಸುವುದು.

ಕ. ಉಪಕಲಮು (ಎ) ಮತ್ತು (ಬಿ)ರ ಅಡಿಯಲ್ಲಿ ವಿವರಿಸಲಾದಂತೆ ಬಾಧಿತ ವ್ಯಕ್ತಿಯನ್ನು ಅಥವಾ ಅವಳಿಗೆ ಸಂಬಂಧಿಸಿದವರನ್ನು ಬೆದರಿಸುವುದು.

ಡ. ಬಾಧಿತ ವ್ಯಕ್ತಿಗೆ ದೈಹಿಕವಾಗಿ ಅಥವಾ ಮಾನಸಿಕವಾಗಿ ಬೇರೆ ಯಾವುದೇ ರೀತಿಯಲ್ಲಿ ಕ್ಷತಿಯುಂಟು ಮಾಡಿದರೆ ಅಥವಾ ಅಪಾಯ ಉಂಟುಮಾಡಿದರೆ ವಿವರಣೆ ೧ ಈ ಕಲಮಿನ ಉದ್ದೇಶಕ್ಕಾಗಿ

೧. "ದೈಹಿಕ ದುರುಪಯೋಗ" ಎಂದರೆ ಬಾಧಿತ ವ್ಯಕ್ತಿಗೆ ಶಾರೀರಿಕ ನೋವು ಹಾನಿಯುಂಟುಮಾಡುವ ಅಥವಾ ಅವಳ ಅಭಿವೃದ್ಧಿಯನ್ನು ದುರ್ಬಲಗೊಳಿಸುವ ಸ್ವರೂಪವುಳ್ಳ ಯಾವುದೇ ಕೃತಿ ಅಥವಾ ವರ್ತನೆ ಮತ್ತು ಇದು ಹಲ್ಲೆ ಅಪರಾಧಿಕ ಭಯೋತ್ಪಾದನೆ ಹಾಗೂ ಅಪರಾಧಿಕ ಬಲವನ್ನು ಒಳಗೊಳ್ಳುತ್ತದೆ.

೨. "ಲೈಂಗಿಕ ದುರುಪಯೋಗ" ಎಂಬುದು ಮಹಿಳೆಯ ಘನತೆಯನ್ನು ದುರುಪಯೋಗಗೊಳಿಸುವ, ಅವಮಾನಗೊಳಿಸುವ, ಕೆಳದರ್ಜೆಗಿಳಿಸುವ ಅಥವಾ ಅನ್ಯಥಾ ಉಲ್ಲಂಘಿಸುವ ಲೈಂಗಿಕ ಸ್ವರೂಪದ ಯಾವುದೇ ವರ್ತನೆಯನ್ನು ಒಳಗೊಳ್ಳುತ್ತದೆ.

೩. ಮೌಖಿಕ ಹಾಗೂ ಭಾವುಕ ದುರುಪಯೋಗ ಈ ಕೆಳಗಿನವುಗಳನ್ನು ಒಳಗೊಳ್ಳುತ್ತದೆ. ಅ) ಅಪಮಾನಗಳು, ಗೇಲಿ, ಮಾನಕ್ಕೆ ಧಕ್ಕೆ, ಹೆಸರಿಡುವಿಕೆ ಹಾಗೂ ವಿಶೇಷವಾಗಿ ಮಗು ಅಥವಾ ಗಂಡು ಮಗು ಆಗದಿರುವ ಸಂಬಂಧಿ ಅಪಮಾನಗಳು ಅಥವಾ ಗೇಲಿ.

ಬ) ಬಾಧಿತ ವ್ಯಕ್ತಿ ಆಸಕ್ತಿ ಹೊಂದಿದ ಯಾವುದೇ ವ್ಯಕ್ತಿಗೆ ದೈಹಿಕ ನೋವುಂಟು ಮಾಡುವ ಸತತ ಬೆದರಿಕೆಗಳು.

೪. ಆರ್ಥಿಕ ದುರುಪಯೋಗ ಆ ಕೆಳಗಿನವುಗಳನ್ನು ಒಳಗೊಳ್ಳುತ್ತದೆ.

ಅ) ಬಾಧಿತ ವ್ಯಕ್ತಿಗೆ ಹಾಗೂ ಅವಳಿಗಿರುವ ಯಾವುದೇ ಮಕ್ಕಳಿಗೆ ಗೃಹ ಬಳಕೆಯ ಅವಶ್ಯಕತೆಗಳು, ಸ್ತ್ರೀ ಧನ, ಜಂಟಿಯಾಗಿ ಅಥವಾ ಪ್ರತ್ಯೇಕವಾಗಿ ಬಾಧಿತ ವ್ಯಕ್ತಿಯ ಸ್ವಾಮ್ಯದ ಆಸ್ತಿ, ಸಹಬೋಗದ ಮನೆ ಸಂಬಂಧಿ ಬಾಡಿಗೆಯ ಸಂದಾಯ ಹಾಗೂ ಪೋಟೆಗೆ ಇವುಗಳನ್ನು ಒಳಗೊಂಡಂತೆ ಆದರೆ ಇವುಗಳಿಗೆ ಸೀಮಿತವಲ್ಲದಂತೆ ನ್ಯಾಯಾಲಯದ ಆದೇಶದಡಿಯಲ್ಲಿ ಬಾಧಿತ ವ್ಯಕ್ತಿಯು ಹಕ್ಕುಳ್ಳವಳಾದ ಅಥವಾ ಅವಶ್ಯಕತೆಯಿಂದಾಗಿ ಬಾಧಿತ ವ್ಯಕ್ತಿಗೆ ಅಗತ್ಯವಾದ ಎಲ್ಲಾ ಅಥವಾ ಯಾವುದೇ ಆರ್ಥಿಕ ಅಥವಾ ಹಣಕಾಸಿನ ಸಂಪನ್ಮೂಲಗಳ ಹರಣ.

ಬ) ಬಾಧಿತ ವ್ಯಕ್ತಿಯು ಹೊಂದಿರಬಹುದಾದ ಯಾವುದೇ ಚರ ಅಥವಾ ಸ್ಥಿರ ಆಸ್ತಿಗಳು, ಬೆಲೆಬಾಳುವಂತಹ, ಷೇರುಗಳು, ಭದ್ರತೆಗಳು, ಬಾಂಡುಗಳು, ಮತ್ತು ಇತರೆ ಯಾವುದೇ ಆಸ್ತಿಯನ್ನು ಅಥವಾ ಬಾಧಿತ ವ್ಯಕ್ತಿಯ ಮಕ್ಕಳಿಗೆ ಸಂಬಂಧಿಸಿದ ಅಥವಾ ಅವಳ ಸ್ತ್ರೀಧನ ಆಸ್ತಿಯು ಅದು ಪ್ರತ್ಯೇಕವಾದುದ್ದಾಗಿರಲಿ ಅಥವಾ ಜಂಟಿ ಉಳ್ಳದ್ದಾಗಿರಲಿ ಮಾರಾಟ ಮಾಡಲು ಹೊರಟದ್ದರೇ.

ಕ) ಬಾಧಿತ ವ್ಯಕ್ತಿಯ ಪಡೆಯಬಹುದಾದ ಅಥವಾ ಅನುಭವಿಸಬಹುದಾದ ಯಾವುದೇ ಸಂಪನ್ಮೂಲಗಳನ್ನು ಪಡೆಯಲು ಪ್ರತಿಬಂಧಿಸುವುದು.

**ವಿವರಣೆ ೨.**

ಈ ಕಲಮಿನ ಅನ್ವಯ ಪ್ರತಿವಾದಿಯ ಯಾವುದೇ ಕಾರ್ಯ ಕರ್ತವ್ಯ ಲೋಪ, ಕೃತ್ಯ ಅಥವಾ ನಡತೆ ಇವುಗಳು ಕೌಟುಂಬಿಕ ಹಿಂಸೆ ಎನಿಸಿಕೊಳ್ಳುತ್ತದೋ ಇಲ್ಲವೋ ಎಂಬುದನ್ನು ಆಯಾ ವಸ್ತುಸ್ಥಿತಿಗನುಗುಣವಾಗಿ ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಅಥವಾ ನಡೆಯುವ ಸಾಧ್ಯತೆ ಇದೆಯೆಂದು ನಂಬಲು ಯೋಗ್ಯ ಕಾರಣವಿದ್ದಲ್ಲಿ ಅವನು ಸಂಬಂಧಪಟ್ಟ ಸಂರಕ್ಷಕ ಅಧಿಕಾರಿಗೆ ಅದರ ಬಗ್ಗೆ ಮಾಹಿತಿ ನೀಡಬಹುದು.

೨. ಉಪಕಲಮು ೧ ರ ಉದ್ದೇಶಕ್ಕಾಗಿ ಮಾಹಿತಿಯನ್ನು ಸದ್ಭಾವನೆಯಲ್ಲಿ, ಯಾವುದೇ ವ್ಯಕ್ತಿಯಿಂದ ಪಡೆದಿದಿದ್ದಲ್ಲಿ ಅಂತಹವರನ್ನು ಸಿವಿಲ್ ಅಥವಾ ಕ್ರಿಮಿನಲ್ ಜವಾಬ್ದಾರಿಗೆ ಒಳಪಡಿಸತಕ್ಕದ್ದಲ್ಲ.

ಕಲಮು ೫ ಆರಕ್ಷಕ ಅಧಿಕಾರಿಗಳು, ಸೇವೆ ಒದಗಿಸುವವರು ಮತ್ತು ಮ್ಯಾಜಿಸ್ಟ್ರೇಟರ ಕರ್ತವ್ಯಗಳು.

ಒಬ್ಬ ಪೋಲಿಸ್ ಅಧಿಕಾರಿ ಸಂರಕ್ಷಕ ಅಧಿಕಾರಿ, ಸೇವೆ ಒದಗಿಸುವವ ಅಥವಾ ಮ್ಯಾಜಿಸ್ಟ್ರೇಟ್ ಕೌಟುಂಬಿಕ ಹಿಂಸೆಯ ಫಿರ್ಯಾದು ಸ್ವೀಕರಿಸಿದ್ದಲ್ಲಿ ಅಥವಾ ಗೃಹಕೃಷಿ ಹಿಂಸೆ ಘಟನಾ ಸ್ಥಳದಲ್ಲಿ ಹಾಜರಿದ್ದಲ್ಲಿ ಕೌಟುಂಬಿಕ ಹಿಂಸೆ ಘಟನೆಯ ಬಗೆಗೆ ವರದಿ ಸ್ವೀಕರಿಸಿದ್ದಲ್ಲಿ ಕೂಡಲೇ ಬಾಧಿತ ವ್ಯಕ್ತಿಗೆ ಈ ಕೆಳಕಂಡಂತೆ ತಿಳಿಸತಕ್ಕದ್ದು.

ಅ) ಅರ್ಜಿಯನ್ನು ಸಲ್ಲಿಸಿ ಸಂರಕ್ಷಿತ ಆದೇಶದ ಪರಿಹಾರ ಪಡೆಯುವುದಕ್ಕಾಗಿ, ಆರ್ಥಿಕ ಪರಿಹಾರ, ಅಭಿರಕ್ಷೆಯ ಪರಿಹಾರ, ಆಶ್ರಿತ ಆದೇಶ, ಪರಿಹಾರ ಆದೇಶ ಇವೆಲ್ಲವುಗಳನ್ನು ಪಡೆಯುವುದಕ್ಕಾಗಿ ಅಥವಾ ಈ ಕಾಯ್ದೆಯಡಿಯಲ್ಲಿ ಒಂದಿಕ್ಕಿಂತ ಹೆಚ್ಚು ಆದೇಶ ಪಡೆಯುವುದಕ್ಕಾಗಿ ಅವಳ ಹಕ್ಕುಗಳ ಬಗ್ಗೆ ತಿಳಿಯುವುದು.

ಬ) ಸೇವೆ ಒದಗಿಸುವವರಿಂದ ಸಿಗುವ ಸೇವೆಗಳ ಬಗ್ಗೆ.

ಕ) ಸಂರಕ್ಷಕ ಅಧಿಕಾರಿಗಳಿಂದ ದೊರಕುವ ಸೇವೆಗಳ ಬಗ್ಗೆ.

ಡ) ಕಾನೂನು ಸೇವಾ ಪ್ರಾಧಿಕಾರದ ಆಯ್ಕೆ ೧೯೮೭ರ (೩೯ರ ೧೯೮೭) ಅಡಿಯಲ್ಲಿ ಅವಳ ಹಕ್ಕುಗಳ ಬಗ್ಗೆ ಉಚಿತ ಕಾನೂನು ಸೇವೆ ಪಡೆಯುವ ಬಗ್ಗೆ.

ಇ) ಭಾರತೀಯ ದಂಡ ಸಂಹಿತೆ ಕಲಮು ೪೯೮-ಎರ ಅಡಿಯಲ್ಲಿ ಅವಶ್ಯಕವೆನಿಸಿದ ಬಗ್ಗೆ ಫಿರ್ಯಾದು ದಾಖಲು ಮಾಡಲು ಅವಳಿಗಿರುವ ಹಕ್ಕಿನ ಬಗ್ಗೆ.

ಈ ಕಾಯ್ದೆಯಡಿಯಲ್ಲಿ ಪೋಲಿಸ್ ಅಧಿಕಾರಿಯನ್ನು ತನ್ನ ಕರ್ತವ್ಯದಿಂದ ವಿಮುಕ್ತನನ್ನಾಗಿ ಮಾಡುವಂತಿಲ್ಲ. ಕೌಟುಂಬಿಕ ಹಿಂಸೆಯ ಬಗ್ಗೆ ಮಾಹಿತಿಯನ್ನು ಪ್ರಕಾರ ಕ್ರಮ ಜರುಗಿಸತಕ್ಕದ್ದು.

**ಕಲಮು ೬. ಆಶ್ರಯ ಮನೆ ನೀಡುವರ ಕರ್ತವ್ಯಗಳು**

ಬಾಧಿತ ವ್ಯಕ್ತಿ ಅಥವಾ ಅವಳ ಪರವಾಗಿ ಸಂರಕ್ಷಣಾಧಿಕಾರಿ ಅಥವಾ ಸೇವೆ ಒದಗಿಸುವವ ಆಶ್ರಯ ಮನೆ ನೀಡುವ ವ್ಯವಸ್ಥಾಪಕನನ್ನು ಅವಳಿಗೆ ಆಶ್ರಯ ನೀಡಬೇಕೆಂದು ವಿನಂತಿಸಿಕೊಂಡರೆ ಅಂತಹ ವ್ಯಕ್ತಿಯ ಬಾಧಿತ ವ್ಯಕ್ತಿಗೆ ಆಶ್ರಯ ಮನೆಯನ್ನು ಒದಗಿಸತಕ್ಕದ್ದು.

**ಕಲಮು ೭. ವೈದ್ಯಕೀಯ ಸೌಲಭ್ಯ ನೀಡುವವರ ಕರ್ತವ್ಯಗಳು**

ಬಾಧಿತ ವ್ಯಕ್ತಿ ಅಥವಾ ಅವಳ ಪರವಾಗಿ ಸಂರಕ್ಷಣಾಧಿಕಾರಿ ಅಥವಾ ಸೇವೆ ಒದಗಿಸುವವ ವೈದ್ಯಕೀಯ ಸೌಲಭ್ಯ ನೀಡುವವರನ್ನು ಅವಳಿಗೆ ವೈದ್ಯಕೀಯ ಸೌಲಭ್ಯ ನೀಡುವಂತೆ ಕೋರಿಕೊಂಡಲ್ಲಿ ಅಂತಹ ವ್ಯಕ್ತಿಯ ಬಾಧಿತ ವ್ಯಕ್ತಿಗೆ ವೈದ್ಯಕೀಯ ಸೌಲಭ್ಯ ನೀಡತಕ್ಕದ್ದು.

**ಕಲಮು ೮. ಸಂರಕ್ಷಕ ಅಧಿಕಾರಿಗಳ ನೇಮಕಾತಿ**

೧. ರಾಜ್ಯ ಸರಕಾರವು ಅಧಿಸೂಚನೆಯ ಮೂಲಕ ಪ್ರತಿಯೊಂದು ಜಿಲ್ಲೆಗೆ ಅವಶ್ಯಕವೆನಿಸಿದಷ್ಟು ಸಂಖ್ಯೆಯ ಸಂರಕ್ಷಕ ಅಧಿಕಾರಿಯವರನ್ನು ನೇಮಿಸತಕ್ಕದ್ದು ಮತ್ತು ಸಂರಕ್ಷಕ ಅಧಿಕಾರಿಯು ಈ ಕಾಯ್ದೆಯಡಿಯಲ್ಲಿ ಕಾರ್ಯನಿರ್ವಹಿಸುವ ವ್ಯಾಪ್ತಿ ಮತ್ತು ಕರ್ತವ್ಯವನ್ನು ಸೂಚಿಸತಕ್ಕದ್ದು.

೨. ಸಂರಕ್ಷಕ ಅಧಿಕಾರಿಯು ಆದಷ್ಟು ಮಹಿಳೆಯಾಗಿರತಕ್ಕದ್ದು ಮತ್ತು ನಮೂದಿಸಬಹುದಾದ ಅರ್ಹತೆಯನ್ನು ಹೊಂದಿರತಕ್ಕದ್ದು.

೩. ಸಂರಕ್ಷಕ ಅಧಿಕಾರಿ ಮತ್ತು ಆತನ ಕೆಳ ಅಧಿಕಾರಿಗಳ ಸೇವೆಯ ಷರತ್ತು ಮತ್ತು ನಿಬಂಧನೆಗಳು ನಮೂದಿಸಬಹುದಾದಂತೆ ಇರತಕ್ಕದ್ದು.

**ಕಲಮು ೯. ಸಂರಕ್ಷಕ ಅಧಿಕಾರಿಗಳ ಕರ್ತವ್ಯ ಮತ್ತು ಕಾರ್ಯಗಳು**

೧. ಎ) ಈ ಕಲಮಿನಡಿಯಲ್ಲಿ ಮ್ಯಾಜಿಸ್ಟ್ರೇಟರವರು ತಮ್ಮ ಕರ್ತವ್ಯವನ್ನು ನಿಭಾಯಿಸುವಲ್ಲಿ ನೆರವಾಗುವುದು.

ಬಿ) ನಿಗದಿಪಡಿಸಿದಂತಹ ನಮೂನೆಯಲ್ಲಿ ಕೌಟುಂಬಿಕ ಹಿಂಸೆಯ ಬಗ್ಗೆ ಫಿರ್ಯಾದನ್ನು ಸ್ವೀಕರಿಸಿದ ನಂತರ ಮ್ಯಾಜಿಸ್ಟ್ರೇಟರವರಿಗೆ ಸಲ್ಲಿಸಲು ಕೌಟುಂಬಿಕ ಘಟನಾ ವರಧಿಯನ್ನು ತಯಾರಿಸುವುದು ಮತ್ತು ಅದರ ಪ್ರತಿಯನ್ನು ಪೋಲಿಸ್ ಠಾಣೆಯ ಮೇಲ್ವಿಚಾರಕರಿಗೆ ತಯಾರಿಸುವುದು ಮತ್ತು ಅದರ ಪ್ರತಿಯನ್ನು ಪೋಲಿಸ್ ಠಾಣೆಯ ಮೇಲ್ವಿಚಾರಕರಿಗೆ ಉಸ್ತುವಾರಿ ಅಧಿಕಾರಿಗೆ ಮತ್ತು ಆಯಾ ಪ್ರದೇಶದ ಸೇವೆ ಒದಗಿಸುವವರಿಗೆ ರವಾನಿಸುವುದು.

ಸಿ) ನಿಗದಿತ ನಮೂನೆಯಲ್ಲಿ ಮತ್ತು ನಿಗದಿತ ರೀತಿಯಲ್ಲಿ ಮ್ಯಾಜಿಸ್ಟ್ರೇಟರಿಗೆ ಅರ್ಜಿಯನ್ನು ತಯಾರಿಸುವುದು. ಬಾಧಿತ ವ್ಯಕ್ತಿಯ ಇಚ್ಚಿಸಿದಲ್ಲಿ ಸಂರಕ್ಷಿತ ಆದೇಶ ಪರಿಹಾರ ಹೊರಡಿಸಲು ಕೋರಿಕೊಳ್ಳುವುದು.

ಡಿ) ಕಾನೂನು ಸೇವಾ ಪ್ರಾಧಿಕಾರದ ಕಾಯ್ದೆ, ೧೯೮೭ರ ಅಡಿಯಲ್ಲಿ ಬಾಧಿತ ವ್ಯಕ್ತಿಗೆ ಕಾನೂನು ಸಹಾಯ ಒದಗಿಸಿಕೊಡಲು ಭರವಸೆ ನೀಡುವುದು ಮತ್ತು ಉಚಿತ ಸೇವೆಯನ್ನು ದೊರಕಿಸಿಕೊಡಲು ವ್ಯವಸ್ಥೆ ಮಾಡುವುದು.

ಇ) ಕಾನೂನು ದೊರಕಿಸಿಕೊಡುವ ಸೇವೆ ಒದಗಿಸುವವರ ಅಥವಾ ಸಂದಾನಕಾರರ, ಆಶ್ರಿತ ಮನೆಯವರ ಮತ್ತು ಸ್ಥಳಿಯ ಪ್ರದೇಶ ವೈದ್ಯಕೀಯ ಸೇವೆ ನೀಡುವವರ ಪಟ್ಟಿಯನ್ನು ತಯಾರಿಸುವುದು.

ಎಫ್) ಬಾಧಿತ ವ್ಯಕ್ತಿಯು ಇಚ್ಛೆಪಟ್ಟಲ್ಲಿ ಸುರಕ್ಷಿತ ಆಶ್ರಿತ ಮನೆಯ ಸೌಲಭ್ಯ ಮಾಡಿಕೊಡುವುದು ಮತ್ತು ಈ ಬಗ್ಗೆ ಪೋಲಿಸ್ ಠಾಣೆ ಮತ್ತು ಆಯಾ ಅಧಿಕಾರ ವ್ಯಾಪ್ತಿಯ ಮ್ಯಾಜಿಸ್ಟ್ರೇಟರವರಿಗೆ ವರದಿ ಮಾಡುವುದು.

ಜಿ) ಬಾಧಿತ ವ್ಯಕ್ತಿಯ ದೈಹಿಕ ಗಾಯಗಳಿಂದ ನರಳುತ್ತಿದ್ದರೆ ಅವಳನ್ನು ವೈದ್ಯಕೀಯ ಪರೀಕ್ಷೆಗೆ ಒಳಪಡಿಸಿ ಆ ಬಗ್ಗೆ ಕೌಟುಂಬಿಕ ಹಿಂಸೆ ನಡೆದಿದೆ. ಎನ್ನಲಾದ ಸ್ಥಳೀಯ ಪೋಲಿಸ್ ಠಾಣೆ ಮತ್ತು ಆಯಾ ಪ್ರದೇಶದ ಅಧಿಕಾರದ ವ್ಯಾಪ್ತಿಯ ಮ್ಯಾಜಿಸ್ಟ್ರೇಟರಿಗೆ ವರದಿ ಮಾಡುವುದು.

ಹೆಚ್) ಕಲಮು ೨೦ರ ಅಡಿಯಲ್ಲಿ ಹಣಕಾಸಿನ ಪರಿಹಾರದ ಆದೇಶವನ್ನು ಹೊರಡಿಸಲಾದುದನ್ನು ದಂಡ ಪ್ರಕ್ರಿಯಾ ಸಂಹಿತೆ ೧೯೭೩ರ ಅಡಿಯಲ್ಲಿ ನಿಗದಿಪಡಿಸಿದ ಪ್ರಕ್ರಿಯೆಯಂತೆ ಅನುಷ್ಠಾನಗೊಳಿಸುವ ಬಗ್ಗೆ ಭರವಸೆ ನೀಡುವುದು.

ಐ) ಇತರೆ ನಮೂದಿಸಲಾದ ಕರ್ತವ್ಯಗಳನ್ನು ನೆರವೇರಿಸುವುದು.

ಜೆ) ಸಂರಕ್ಷಕ ಅಧಿಕಾರಿಯು ಮ್ಯಾಜಿಸ್ಟ್ರೇಟರ ಮೇಲ್ವಿಚಾರಣೆ ಮತ್ತು ನಿಯಂತ್ರಣದಲ್ಲಿರತಕ್ಕದ್ದು ಹಾಗೂ ಮ್ಯಾಜಿಸ್ಟ್ರೇರವರು ವಹಿಸಿದ ಇತರೆ ಕರ್ತವ್ಯಗಳನ್ನು ಮತ್ತು ಈ ಕಾಯ್ದೆಯಡಿಯಲ್ಲಿ ಸರಕಾರವು ವಿಧಿಸಿದ ಕರ್ತವ್ಯವನ್ನು ನೆರವೇರಿಸತಕ್ಕದ್ದು.

**ಕಲಮು ೧೦. ಸೇವೆ ಒದಗಿಸುವವರು**

೧. ಈ ಬಗ್ಗೆ ಮಾಡಲಾದ ನಿಯಮಗಳಿಗನುಗುಣವಾಗಿ ಯಾವುದೇ ಸಂಘಗಳ ನೊಂದಾಣಿ ಕಾಯ್ದೆ ೧೯೬೦ರ ಅಡಿಯಲ್ಲಿ ನೊಂದಾಯಿಸಿದ ಯಾವುದೇ ವೈಯಕ್ತಿಕ ಸಂಘ ಅಥವಾ ಕಂಪನಿಕಾಯ್ದೆ ೧೯೫೬ರ ಅಡಿಯಲ್ಲಿ ನೊಂದಾಯಿಸಿದ ಕಂಪನಿ ಅಥವಾ ಮಹಿಳೆಯ ಹಕ್ಕು ಮತ್ತು ಹಿತಾಸಕ್ತಿಯನ್ನು ರಕ್ಷಿಸುವ ಉದ್ದೇಶವಿಟ್ಟುಕೊಂಡು ಅಂದರೆ ಕಾನೂನು ಸಹಾಯ, ವೈದ್ಯಕೀಯ ಸೇವೆ, ಹಣಕಾಸಿನ ಅಥವಾ ಇತರೆ ಸಹಾಯ ಒದಗಿಸುವ ಬಗ್ಗೆ ಕಾನೂನಿನಡಿಯಲ್ಲಿ ರಚನೆಯಾದ ಸಂಸ್ಥೆಗಳು ರಾಜ್ಯ ಸರಕಾರದೊಂದಿಗೆ ಈ ಕಾಯ್ದೆಯಡಿಯಲ್ಲಿ ಸೇವೆ ಒದಗಿಸುವ ಸಲುವಾಗಿ ನೊಂದಾಣಿ ಮಾಡಿಸತಕ್ಕದ್ದು.

೨. ಉಪಕಲಮು ೧ರ ಅಡಿಯಲ್ಲಿ ನೊಂದಾಯಿಸಲಾದ ಸೇವೆ ಒದಗಿಸುವವ ಈ ಕೆಳಕಂಡ ಅಧಿಕಾರವನ್ನು ಹೊಂದಿರತಕ್ಕದ್ದು.

ಅ) ನಿಗದಿತ ನಮೂನೆಯಲ್ಲಿ ಕೌಟುಂಬಿಕ ಘಟನಾ ವರದಿಯನ್ನು ದಾಖಲಿಸುವುದು, ಬಾಧಿತ ವ್ಯಕ್ತಿಯ ಒಂದು ವೇಳೆ ಇಚ್ಛಿಸಿದಲ್ಲಿ ಅದನ್ನು ಆಯಾ ಮ್ಯಾಜಿಸ್ಟ್ರೇಟರಿಗೆ ಹಾಗೂ ಕೌಟುಂಬಿಕ ಹಿಂಸೆ ನಡೆದ ಸ್ಥಳದ ಕಾರ್ಯವ್ಯಾಪ್ತಿ ಹೊಂದಿರುವ ಸಂರಕ್ಷಣಾಧಿಕಾರಿಗಳಿಗೆ ರವಾನಿಸಬೇಕು.

ಬ) ಬಾಧಿತ ವ್ಯಕ್ತಿಯನ್ನು ವೈದ್ಯಕೀಯ ಚಿಕಿತ್ಸೆಗೆ ಒಳಪಡಿಸುವುದು ಮತ್ತು ಕೌಟುಂಬಿಕ ಹಿಂಸೆ ನಡೆದ ಸ್ಥಳದ ಕಾರ್ಯವ್ಯಾಪ್ತಿ ಹೊಂದಿರುವ ಸಂರಕ್ಷಣಾಧಿಕಾರಿಗಳಿಗೆ, ಪೋಲಿಸ್ ಠಾಣೆಗೆ ರವಾನಿಸಬೇಕು.

ಕ) ಬಾಧಿತ ವ್ಯಕ್ತಿಯು ಬಯಸಿದಲ್ಲಿ, ಆಶ್ರಿತ ಮನೆಯಲ್ಲಿ ಆಶ್ರಯ ಪಡೆದಿದ್ದಾಳೆಂದು ದೃಢಪಡಿಸಿಕೊಳ್ಳಬೇಕು. ಬಾಧಿತ ವ್ಯಕ್ತಿಗೆ ಆಶ್ರಿತ ಮನೆಯಲ್ಲಿ ಆಶ್ರಯ ಒದಗಿಸಿದ ಬಗ್ಗೆ ಕೌಟುಂಬಿಕ ಹಿಂಸೆ ನಡೆದ ಸ್ಥಳದ ಕಾರ್ಯವ್ಯಾಪ್ತಿ ಹೊಂದಿರುವ ಪೋಲೀಸ್ ಠಾಣೆಗೆ ವರದಿ ಮಾಡುವುದು.

೩. ಯಾವುದೇ ಸೇವೆ ಒದಗಿಸುವವನ ವಿರುದ್ಧ ಅಥವಾ ಸೇವೆ ಒದಗಿಸುವ ಸದಸ್ಯನ ವಿರುದ್ಧ ಈ ಕಲಮಿನ ಅಡಿಯಲ್ಲಿ ಯಾರು ತಮ್ಮ ಕರ್ತವ್ಯವವನ್ನು ಕೌಟುಂಬಿಕ ಹಿಂಸೆಯ ಅಪರಾಧವನ್ನು ತಡೆಯುವ ಸಲುವಾಗಿ ಸದ್ಭಾವನೆಯಿಂದ ನಿರ್ವಹಿಸುತ್ತಾರೋ ಅಥವಾ ನಿರ್ವಹಿಸುವವರಿರುತ್ತಾರೇ.

**ಟಿಪ್ಪಣಿ**

ಈ ಕಾಯ್ದೆಯ ಉದ್ದೇಶಕ್ಕಾಗಿ ಸೇವೆ ಒದಗಿಸುವವ ರಾಜ್ಯ ಸರಕಾರದೊಂದಿಗೆ ಈ ಕೆಳಕಂಡ ಗುಣಲಕ್ಷಣಗಳಿಗಾಗಿ ಸೇವೆ ಒದಗಿಸುವವ ಎಂದು ನೊಂದಣಿ ಮಾಡಿಸತಕ್ಕದ್ದು.

ಸಂಘಗಳ ನೊಂದಾಣಿ ಕಾಯ್ದೆ ೧೮೬೦ರ ಅಡಿಯಲ್ಲಿ ವೈಯಕ್ತಿಕ ಸಂಘವೆಂದು ನೊಂದಾಣಿ ಮೂಲಕ ಅಂದರೆ ಕಾನೂನು ಸೇವೆ ಒದಗಿಸುವುದು, ವೈದ್ಯಕೀಯ ಸೇವೆ, ಹಣಕಾಸಿನ ಅಥವಾ ಯಾವುದೇ ಸಹಾಯ ಒದಗಿಸುವ ಉದ್ದೇಶದಿಂದ ರಚನೆಗೊಂಡಿರುವಂತಹದ್ದು.

ಸೇವೆ ಒದಗಿಸುವವ ಈ ಕೆಳಕಂಡ ಅಧಿಕಾರವನ್ನು ಹೊಂದಿರತಕ್ಕದ್ದು.

ಅ) ಕೌಟುಂಬಿಕ ಘಟನಾ ವರದಿಯನ್ನು ನಮೂದಿಸುವ ಅಧಿಕಾರ ಮತ್ತು ಅದರ ಪ್ರತಿಯನ್ನು ಸ್ಥಳೀಯ ಪ್ರದೇಶದ ಮ್ಯಾಜಿಸ್ಟ್ರೇಟರಿಗೆ ಮತ್ತು ಸಂರಕ್ಷಕ ಅಧಿಕಾರಿಗೆ ರವಾನಿಸುವ ಅಧಿಕಾರ.

ಬ) ಬಾಧಿತ ವ್ಯಕ್ತಿಯನ್ನು ವೈದ್ಯಕೀಯ ಚಿಕಿತ್ಸೆಗೆ ಒಳಪಡಿಸುವ ಅಧಿಕಾರ ಹಾಗೂ ಪ್ರತಿಯನ್ನು ಸ್ಥಳೀಯ ಪ್ರದೇಶದ ಪೋಲೀಸ್ ಠಾಣೆಗೆ ರವಾನಿಸುವುದು.

ಕ) ಬಾಧಿತ ವ್ಯಕ್ತಿಗೆ ಆಶ್ರಯ ಮನೆಯನ್ನು ಒದಗಿಸುವ ಬಗ್ಗೆ ಭರವಸೆ ನೀಡುವ ಅಧಿಕಾರ ಹಾಗೂ ಆ ಪ್ರತಿಯನ್ನು ಸ್ಥಳೀಯ ವ್ಯಾಪ್ತಿಯ ಪ್ರದೇಶದ ಪೋಲೀಸ್ ಠಾಣೆಗೆ ರವಾನಿಸುವ ಅಧಿಕಾರ.

**ಕಲಮು ೧೧. ಸರಕಾರದ ಕರ್ತವ್ಯಗಳು**

ಕೇಂದ್ರ ಮತ್ತು ಎಲ್ಲಾ ರಾಜ್ಯಸರಕಾರಗಳು ಅವಶ್ಯಕ ಕ್ರಮವನ್ನು ಜರುಗಿಸುವ ಬಗ್ಗೆ ಈ ಕೆಳಕಾಣಿಸಿದಂತೆ ಭರವಸೆ ನೀಡತಕ್ಕದ್ದು.

ಅ) ಈ ಕಾಯ್ದೆಯ ಉಪಬಂಧಗಳು ಸಾರ್ವಜನಿಕ ಮಾಧ್ಯಮ ಅಂದರೆ, ಟಿ.ವಿ., ರೇಡಿಯೋ, ಮತ್ತು ಮುದ್ರಣ ಮಾಧ್ಯಮದ ಮೂಲಕ ಪ್ರಚಾರಕ್ಕಾಗಿ ಮಹತ್ವತೆ ನೀಡಿದೆ.

ಬ) ಕೇಂದ್ರ ಮತ್ತು ರಾಜ್ಯಸರಕಾರದ ಅಧಿಕಾರಿಗಳು, ಪೋಲೀಸ್ ಅಧಿಕಾರಿಗಳು ಮತ್ತು ನ್ಯಾಯಾಂಗೀಯ ಸೇವೆಯ ಸದಸ್ಯರು ಈ ಕಾಯ್ದೆಯಡಿಯಲ್ಲಿ ಜನ ಜಾಗೃತಿ ಮೂಡಿಸುವ ತರಬೇತಿ ಕಾರ್ಯಕ್ರಮವನ್ನು ಹಮ್ಮಿಕೊಳ್ಳಬಹುದು.

ಕ) ಸಂಬಂಧಿಸಿದ ಮಂತ್ರಗಳು ಮತ್ತು ಕಾನೂನಿನೊಂದಿಗೆ ವ್ಯವಹರಿಸುವ ಇಲಾಖೆಗಳು, ಗೃಹಖಾತೆ, ಸುರಕ್ಷತೆ, ಮಾನವ ಸಂಪನ್ಮೂಲ ಇಲಾಖೆ ಇವುಗಳು ಸಮನ್ವಯತೆ ಹೊಂದಿ ಕೌಟುಂಬಿಕ ಹಿಂಸೆಯ ವಿವಾದದ ಬಗ್ಗೆ ಕಾಲಕಾಲಕ್ಕೆ ಜಾಗೃತಿ ಮೂಡಿಸುವ ಕಾರ್ಯಕ್ರಮ ಹಮ್ಮಿಕೊಳ್ಳತಕ್ಕದ್ದು.

## ಅಧ್ಯಾಯ ೪

## ಪರಿಹಾರ ಆದೇಶಗಳನ್ನು ಪಡೆಯುವ ಪ್ರಕ್ರಿಯೆ

**ಕಲಮು ೧೨. ಮ್ಯಾಜಿಸ್ಟ್ರೇಟ್‌ರವರಿಗೆ ಅರ್ಜಿ.**

೧. ಬಾಧಿತ ವ್ಯಕ್ತಿ ಅಥವಾ ಸಂರಕ್ಷಕ ಅಧಿಕಾರಿ ಅಥವಾ ಬಾಧಿತ ವ್ಯಕ್ತಿಯ ಪರವಾಗಿ ಯಾವುದೇ ವ್ಯಕ್ತಿ ಮ್ಯಾಜಿಸ್ಟ್ರೇಟರ ಮುಂದೆ ಈ ಕಾಯ್ದೆಯ ಅಡಿಯಲ್ಲಿ ಅರ್ಜಿಯನ್ನು ಸಲ್ಲಿಸಿ ಒಂದು ಅಥವಾ ಹೆಚ್ಚಿನ

ಪರಿಹಾರವನ್ನು ಕೋರಿಕೊಳ್ಳಬಹುದು. ಪರಂತು ಅಂತಹ ಅರ್ಜಿಯ ಮೇಲೆ ಆದೇಶ ಹೊರಡಿಸುವ ಪೂರ್ವದಲ್ಲಿ ಮ್ಯಾಜಿಸ್ಟ್ರೇಟರು ಸಂರಕ್ಷಕ ಅಧಿಕಾರಿಯಿಂದ ಅಥವಾ ಸೇವೆ ಒದಗಿಸುವವನಿಂದ ಸ್ವೀಕರಿಸಿದ ಕೌಟುಂಬಿಕ ಘಟನಾ ವರದಿಯನ್ನು ಪರಿಗಣನೆಗೆ ತೆಗೆದುಕೊಳ್ಳತಕ್ಕದ್ದು.

೨. ಉಪಕಲಮು ೧ರ ಅಡಿಯಲ್ಲಿ ಕೋರಿಕೊಳ್ಳಲಾದ ಪರಿಹಾರವು ಪರಿಹಾರದ ಮೊತ್ತದ ಆದೇಶವನ್ನು ಹೊರಡಿಸುವಿಕೆಗಾಗಿ ಅಥವಾ ನಷ್ಟಕ್ಕಾಗಿ ಪರಿಹಾರ ಕೋರಿ ದಾವೆ ಹೂಡುವಿಕೆಗಾಗಿ ಎದುರುದಾರನಿಂದ ಕೌಟುಂಬಿಕ ಹಿಂಸೆಯ ಕೃತ್ಯದಿಂದಾಗಿ ಗಾಯಗಳಿಗಾಗಿ ಪರಿಹಾರ ಅಥವಾ ನಷ್ಟ ಪಡೆಯಲು ಇರುವ ಆ ವ್ಯಕ್ತಿಯ ಹಕ್ಕಿಗೆ ಬಾಧಕ ಬಾರದ ರೀತಿಯಲ್ಲಿ ಪರಿಹಾರ ಕೋರಿಕೊಳ್ಳುವಿಕೆಯು ಒಳಗೊಳ್ಳುತ್ತದೆ. ಪರಂತು ಪರಿಹಾರಕ್ಕಾಗಿ ಅಥವಾ ನಷ್ಟಕ್ಕಾಗಿ ಬಾಧಿತ ವ್ಯಕ್ತಿಯ ಪರವಾಗಿ ಯಾವುದೇ ನ್ಯಾಯಾಲಯವು ಡಿಕ್ರಿಯನ್ನು ಹೊರಡಿಸಿರುತ್ತದೆಯೋ ಮೊತ್ತ ಇತ್ಯಾದಿ ಕೊಟ್ಟಿದ್ದರೆ ಅಥವಾ ಆದೇಶದಂತೆ ಕೊಡಲ್ಪ ಡುತ್ತಿದ್ದಾರೆ ಅಂತಹದ್ದನ್ನು ವಜಾವಟ್ಟು (ಸೆಟ್ ಆಫ್) ಮಾಡತಕ್ಕದ್ದು.

೩. ಉಪಕಲಮು ೧ರಡಿಯಲ್ಲಿ ಸಲ್ಲಿಸಲಾದ ಅರ್ಜಿಯು ನಿಗದಿತ ನಮೂನೆಯಲ್ಲಿನ ವಿವರದಂತೆ ಇರ ತಕ್ಕದ್ದು ಅಥವಾ ಅದಕ್ಕೆ ಹೋಲುವಂತೆ ಇರತಕ್ಕದ್ದು.

೪. ಮ್ಯಾಜಿಸ್ಟ್ರೇಟರು ಅರ್ಜಿಯನ್ನು ಸ್ವೀಕರಿಸಿದ ದಿನಾಂಕದಿಂದ ೩ ದಿವಸವನ್ನು ಮೊದಲ ಮುದ್ದತ್ತಿಗಾಗಿ ನಿಗದಿ ಪಡಿಸತಕ್ಕದ್ದು ಮತ್ತು ಅಂತಹ ಮುದ್ದತ್ತು ೩ದಿವಸವನ್ನು ಮೀರತಕ್ಕದ್ದಲ್ಲ.

೫. ಮ್ಯಾಜಿಸ್ಟ್ರೇಟರು ಉಪಕಲಮು ೧ರಪಡಿಯಲ್ಲಿ ಮಾಡಲಾದ ಪ್ರತಿಯೊಂದು ಅರ್ಜಿಯನ್ನು ಮೊದಲ ಮುದ್ದತ್ತಿನ ದಿನಾಂಕದಿಂದ ೬೦ ದಿನಗಳ ಒಳಗಾಗಿ ವಿಲೇ ಮಾಡುವ ಪ್ರಯತ್ನ ಮಾಡಬೇಕು.

**ಕಲಮು ೧೩. ನೋಟಿಸಿದ ಜಾರಿ**

೧. ಕಲಮು ೧೨ರಡಿಯಲ್ಲಿ ಮ್ಯಾಜಿಸ್ಟ್ರೇಟರು ಮುದ್ದತ್ತಿನ ದಿನಾಂಕವನ್ನು ನಿಗಧಿಪಡಿಸಿ ಸಂರಕ್ಷಕ ಅಧಿಕಾರಿಗೆ ಕೊಡಲಾದ ನೋಟಿಸನ್ನು ಸಂರಕ್ಷಕ ಅಧಿಕಾರಿಯು ಪ್ರತಿವಾದಿಗೆ ಜಾರಿ ಮಾಡುವ ಬಗ್ಗೆ ನಿಗದಿಪಡಿಸಿದ ರೀತಿಯಂತೆ ಜಾರಿ ಮಾಡತಕ್ಕದ್ದು ಮತ್ತು ಮ್ಯಾಜಿಸ್ಟ್ರೇಟರು ನಿರ್ದೇಶಿಲ್ಪಟ್ಟ ಯಾವುದೇ ವ್ಯಕ್ತಿಯು ನೋಟಿಸು ತಲುಪಿದ ೨ ದಿವಸಗಳ ಅವಧಿಯೊಳಗಾಗಿ ಅಥವಾ ಮುಂದಿನ ಸೂಕ್ತ ಕಾಲಾವಧಿಯಲ್ಲಿ ಮ್ಯಾಜಿಸ್ಟ್ರೇಟರು ಅನುಮತಿಸಿದ್ದಲ್ಲಿ ಮಾತ್ರ ಜಾರಿ ಮಾಡತಕ್ಕದ್ದು.

೨. ಮ್ಯಾಜಿಸ್ಟ್ರೇಟರ ನಿರ್ದೇಶನದಂತೆ ಸಂರಕ್ಷಕ ಅಧಿಕಾರಿಯು ನೋಟಿಸು ಜಾರಿ ಮಾಡಲಾದ ಬಗ್ಗೆ ನಿಗದಿತ ನಮೂನೆಯಲ್ಲಿನ ಘೋಷಣೆಯು ಪ್ರತಿವಾದಿಯ ಮೇಲೆ ಅಥವಾ ಮ್ಯಾಜಿಸ್ಟ್ರೇಟರು ನಿರ್ದೇಶಿಸಿದ ಯಾವುದೇ ವ್ಯಕ್ತಿಯು ಮೇಲೆ ಅಂತಹ ನೋಟಿಸ್ ಜಾರಿಯಾದ ಬಗ್ಗೆ ಎದುರು ರುಜುವಾತು ಸಾಬೀತಾಗುವವರೆಗೆ ಅದು ಪ್ರತಿವಾದಿಗೆ ಅಥವಾ ಯಾವುದೇ ವ್ಯಕ್ತಿಯ ಮೇಲೆ ನೋಟೀಸ್ ಜಾರಿಯಾದ ಬಗ್ಗೆ ರುಜುವಾತು ಎನಿಸಿಕೊಳ್ಳುತ್ತದೆ.

**ಕಲಮು ೧೪. ಸಂದಾನ**

೧. ಮ್ಯಾಜಿಸ್ಟ್ರೇಟರು ಪ್ರಕರಣದ ಯಾವುದೇ ಹಂತದಲ್ಲಿ ಈ ಕಾಯ್ದೆಯಡಿಯಲ್ಲಿ ಪ್ರಕರಣದ ಪ್ರತಿವಾದಿ ಅಥವಾ ಬಾಧಿತ ವ್ಯಕ್ತಿಗೆ ಪ್ರತ್ಯೇಕವಾಗಿ ಅಥವಾ ಜಂಟಿಯಾಗಿ ಅವಶ್ಯ ಅರ್ಹತೆ ಹೊಂದಿರುವ ಸೇವೆ ಒದಗಿಸುವ ಸದಸ್ಯದ ಮುಂದೆ ಸಂಧಾನಕ್ಕಾಗಿ ಹಾಜರಾಗುವಂತೆ ನಿರ್ದೇಶಿಸಬಹುದು.

೨. ಉಪಕಲಮು (೧)ರಲಡಿಯಲ್ಲಿ ಮ್ಯಾಜಿಸ್ಟ್ರೇಟರು ನಿರ್ದೇಶನ ಹೊರಡಿಸಿದಾಗ ಪ್ರಕರಣದ ಮುಂದಿನ ಮುದ್ದತ್ತನ್ನು ೨ ತಿಂಗಳ ಅವಧಿಗೆ ಮಿರದಂತೆ ನಿಗದಿಪಡಿಸತಕ್ಕದ್ದು.

**ಕಲಮು ೧೫. ಕಲ್ಯಾಣ ತಜ್ಞರ ಸಹಾಯ**

ಈ ಕಾಯ್ದೆಯಲ್ಲಿನ ಯಾವುದೇ ಪ್ರಕ್ರಿಯೆಯಲ್ಲಿ ಮ್ಯಾಜಿಸ್ಟ್ರೇಟರು ಸೇವೆ ಒದಗಿಸುವಂತಹ ವ್ಯಕ್ತಿಯ ಅದರಲ್ಲೂ ಮುಖ್ಯವಾಗಿ ಮಹಿಳೆಯ ಸಹಾಯವನ್ನು ಅವಳು ಬಾಧಿತ ವ್ಯಕ್ತಿಗೆ ಸಂಬಂಧಿತಳಾಗಿರಲಿ ಅಥವಾ ಇಲ್ಲದಿರಲಿ, ಆ ವ್ಯಕ್ತಿಯು ಕುಟುಂಬ ಕಲ್ಯಾಣ ಅಭಿವೃದ್ಧಿಗೆ ಅವಶ್ಯಳೆಂದು ತಿಳಿದುಕೊಂಡಾದ ನಂತರ ಅವನ ಪ್ರಕಾರ್ಯವನ್ನು ವಿಮೋಚನೆಗೊಳಿಸಲು ಸಹಾಯ ಮಾಡುವಳೆಂದು ಯೋಚಿಸಿ ನೇಮಕ ಮಾಡಬಹುದು.

**ಕಲಮು ೧೬. ವ್ಯವಹರಣೆಗಳನ್ನು ಗುಪ್ತವಾಗಿ ನಡೆಸುವುದು**

ಒಂದು ವೇಳೆ ಮ್ಯಾಜಿಸ್ಟ್ರೇರು ಪ್ರಕರಣದ ಸಂದರ್ಭವು ಸಮುಚಿತ ಆಧಾರವೆಂದು ಪರ್ಯಾಲೋಚಿಸಿದಲ್ಲಿ ಮತ್ತು ಪ್ರಕರಣದ ಯಾವುದೇ ಒಬ್ಬ ಪಕ್ಷಗಾರರು ಇಚ್ಛಿಸಿದಲ್ಲಿ ಅವರು ಈ ಪ್ರಕರಣದ ವ್ಯವಹರಣೆಯನ್ನು ಗುಪ್ತವಾಗಿ ನಡೆಸಬಹುದು.

**ಕಲಮು ೧೭. ಸಹಬೋಗದ ಮನೆಯಲ್ಲಿ ವಾಸಿಸುವ ಹಕ್ಕು**

೧. ಪ್ರತಿಯೊಬ್ಬ ಗೃಹಕೃತ್ಯ ಸಂಬಂಧವುಳ್ಳ ಮಹಿಳೆಯು ಹಂಚಿಕೊಂಡು ಬಾಳಿದ ಮನೆಯಲ್ಲಿ ಅವಳು ಅದರಲ್ಲಿ ಯಾವುದೇ ಹಕ್ಕು, ಶೀರ್ಷಿಕೆ ಮತ್ತು ಹಿತಾಸಕ್ತಿ ಹೊಂದಿರಲೀ ಅಥವಾ ಹೊಂದದೇ ಇರಲಿ ವಾಸಿಸುವ ಹಕ್ಕನ್ನು ಹೊಂದಿರುತ್ತಾಳೆ.

೨. ಬಾಧಿತ ವ್ಯಕ್ತಿಯನ್ನು ಪ್ರತಿವಾದಿಯು ಸಹಬೋಗದ ಮನೆಯಿಂದ ಅಥವಾ ಅದರ ಯಾವುದೇ ಭಾಗದಿಂದ ಕಾನೂನು ಪ್ರಕ್ರಿಯೆ ಹೊರತುಪಡಿಸಿ ಹೊರದೂಡುವುದು ಅಥವಾ ಒಳಬಿಡದಂತೆ ಮಾಡತಕ್ಕದ್ದಲ್ಲ.

**ಕಲಮು ೧೮. ಸಂರಕ್ಷಣಾ ಆದೇಶಗಳು**

ಮ್ಯಾಜಿಸ್ಟ್ರೇಟರು ಬಾಧಿತ ವ್ಯಕ್ತಿ ಮತ್ತು ಪ್ರತಿವಾದಿಗೆ ಕೇಳುವ ಅವಕಾಶವನ್ನು ಕೊಟ್ಟು ಮತ್ತು ಮೇಲ್ನೋಟಕ್ಕೆ ಕೌಟುಂಬಿಕ ಹಿಂಸೆ ನಡೆದಿದೆ ಅಥವಾ ನಡೆಯಬಹುದು ಎಂದು ಮನದಟ್ಟಾದ ನಂತರ ಬಾಧಿತ ವ್ಯಕ್ತಿಯ ಪರವಾಗಿ ಸಂರಕ್ಷಣಾ ಆದೇಶವನ್ನು ಮತ್ತು ಪ್ರತಿವಾದಿಯನ್ನು ಈ ರೀತಿ ಮಾಡದಂತೆ ನಿಷೇಧಿಸಬಹುದು.

ಅ) ಯಾವುದೇ ರೀತಿಯ ಕೌಟುಂಬಿಕ ಹಿಂಸೆ ನೀಡುವುದರಿಂದ.

ಬ) ಕೌಟುಂಬಿಕ ಹಿಂಸೆ ಮಾಡುವುದಕ್ಕೆ ಸಹಾಯ ಮಾಡುವುದು ಅಥವಾ ಪ್ರಚೋದನೆ ನೀಡುವುದುರಿಂದ.

ಕ) ಬಾಧಿತ ವ್ಯಕ್ತಿಯು ಕೆಲಸ ಮಾಡುವ ಸ್ಥಳಕ್ಕೆ ಪ್ರವೇಶಿಸುವುದರಿಂದ ಅಥವಾ ಒಂದು ವೇಳೆ ಬಾದಿತ ವ್ಯಕ್ತಿಯು ಮಗುವಾಗಿದ್ದರೆ ಅದರ ಶಾಲೆ ಅಥವಾ ಬಾಧಿತ ವ್ಯಕ್ತಿ ಪದೇ ಪದೇ ಬಂದು ಹೋಗುವ ಸ್ಥಳಕ್ಕೆ ಬಂದು ಹೋಗದಂತೆ.

ಡ) ಬಾಧಿತ ವ್ಯಕ್ತಿಯೊಂದಿಗೆ ವೈಯಕ್ತಿಕ, ಮೌಖಿಕ ಅಥವಾ ಲಿಖಿತ, ವಿದ್ಯುನ್ಮಾನ ಅಥವಾ ದೂರವಾಣಿ ಸಂಪರ್ಕಗಳನ್ನೊಳಗೊಂಡಂತೆ ಯಾವುದಾದರೂ ರೀತಿಯಲ್ಲಿ ಸಂಪರ್ಕ ಹೊಂದಲು ಪ್ರಯತ್ನಿ ಸುವುದರಿಂದ.

ಢ) ಉಭಯ ಪಕ್ಷಗಾರರು ಅನುಭವಿಸಿದ ಯಾವುದೇ ಸ್ವತ್ತು ವಿಲೆ ಪಡಿಸುವುದರಿಂದ ಬ್ಯಾಂಕ್ ಲಾಕರ್ ವಹಿಸುವುದರಿಂದ ಅಥವಾ ಬ್ಯಾಂಕ್ ಖಾತೆ ಉಪಯೋಗಿಸುವುದರಿಂದ, ಹೊಂದಿರುವುದರಿಂದ ಅಥವಾ ಅನುಭವಿಸುವುದರಿಂದ ಅಥವಾ ಬಾಧಿತ ವ್ಯಕ್ತಿಯು ಮತ್ತು ಪ್ರತಿವಾದಿಯು ಏಕವಾಗಿ ಬಾಧಿತ ವ್ಯಕ್ತಿಯ ಸ್ತ್ರೀಧನ ಅಥವಾ ಪಕ್ಷಗಾರರು ಜಂಟಿಯಾಗಿ ಅಥವಾ ವೈಯಕ್ತಿಕವಾಗಿ ಹೊಂದಿರುವ ಯಾವುದೇ ಆಸ್ತಿಯನ್ನು ಮ್ಯಾಜಿಸ್ಟ್ರೇಟರ ಅನುಮತಿ ಇಲ್ಲದೆ ಮಾರಾಟ ಮಾಡುವುದರಿಂದ.

ಘ) ಕೌಟುಂಬಿಕ ಹಿಂಸೆಗೆ ಒಳಗಾದ ಬಾಧಿತ ವ್ಯಕ್ತಿಗೆ ಆಶ್ರಯ ನೀಡಿದ ಅವಲಂಬಿತರಿಗೆ ಇತರೆ ಸಂಬಂಧಿಕರಿಗೆ ಅಥವಾ ಯಾವುದೇ ವ್ಯಕ್ತಿಗೆ ಯಾವುದೇ ಹಿಂಸೆ ನೀಡದಂತೆ.

ಗ) ಸಂರಕ್ಷಣಾ ಆದೇಶದಲ್ಲಿ ನಮೂದಿಸಿದ ಇತರೆ ಯಾವುದೇ ಕೃತ್ಯವನ್ನು ಮಾಡುವುದರಿಂದ.

**ಕಲಮು ೧೯. ನಿವಾಸದ ಆದೇಶಗಳು**

೧. ಕಲಮು ೧೨ ಉಪಕಲಮು ೧ರ ಅಡಿಯಲ್ಲಿ ಮಾಡಲಾದ ಅರ್ಜಿಯನ್ನು ಮ್ಯಾಜಿಸ್ಟ್ರೇಟರು ವಿಲೆ ಮಾಡುವಾಗ ಕೌಟುಂಬಿಕ ಹಿಂಸೆ ನಡೆದಿದೆ ಎಂದು ಮನಗಂಡು ಈ ಕೆಳಕಂಡಂತೆ ವಾಸದ ಆದೇಶವನ್ನು ನೀಡಬಹುದು.

ಎ) ಪ್ರತಿವಾದಿಯು ಬಾಧಿತ ವ್ಯಕ್ತಿಯನ್ನು ಹಂಚಿಕೊಂಡು ಬಾಳಿದ ಮನೆಯಿಂದ ಹೊರಹಾಕದಂತೆ ಅವಳ ಸ್ವಾಧೀನಕ್ಕೆ ಧಕ್ಕೆ ತರದಂತೆ ಪ್ರತಿವಾದಿಯು ಕಾನೂನು ಅಥವಾ ಸಮಾನ ಹಿತಾಸಕ್ತಿಯನ್ನು ಹಂಚಿಕೊಂಡು ಬಾಳಿದ ಮನೆಯಲ್ಲಿ ಹೊಂದಿರಲೀ ಅಥವಾ ಹೊಂದದೇ ಇರಲಿ ತಡೆಯುವುದಕ್ಕಾಗಿ.

ಬಿ) ಪ್ರತಿವಾದಿಯು ಹಂಚಿಕೊಂಡು ಬಾಳಿದ ಮನೆಯಲ್ಲಿ ಸ್ವಯಂ ಆಗಿ ತೆರವುಗೊಳಿಸಲು ನಿರ್ದೇಶಿಸು ವುದಕ್ಕಾಗಿ.

ಸಿ) ಪ್ರತಿವಾದಿ ಅಥವಾ ಅವನ ಯಾವುದೇ ಸಂಬಂಧಿಕರು ಬಾಧಿತ ವ್ಯಕ್ತಿಯು ವಾಸವಾಗಿರುವ ಹಂಚಿಕೊಂಡು ಬಾಳಿದ ಮನೆಯ ಯಾವುದೇ ಭಾಗವನ್ನು ಪ್ರವೇಶಿಸುವುದರಿಂದ ತಡೆಯುವುದಕ್ಕಾಗಿ.

ಡಿ) ಪ್ರತಿವಾದಿಯು ಹಂಚಿಕೊಂಡು ಬಾಳಿದ ಮನೆಯನ್ನು ಮಾರಾಟ ಮಾಡುವುದರಿಂದ ಅಥವಾ ವಿಲೇವಾರಿ ಅಥವಾ ಋಣಭಾರಕ್ಕೆ ಒಳಪಡಿಸುವುದರಿಂದ.

ಇ) ಪ್ರತಿವಾದಿಯು ಹಂಚಿಕೊಂಡು ಬಾಳಿದ ಮನೆಯಲ್ಲಿನ ತನ್ನ ಹಕ್ಕನ್ನು ಮ್ಯಾಜಿಸ್ಟ್ರೇಟರನ ಅನುಮತಿಯನ್ನು ಹೊರತುಪಡಿಸಿ ಪರಿತ್ಯಜಿಸುವುದರಿಂದ ತಡೆಯುವುದು.

ಎಫ್) ಪ್ರತಿವಾದಿಯು ಬಾಧಿತ ವ್ಯಕ್ತಿಗೆ ಅವಳು ಹಂಚಿಕೊಂಡು ಬಾಳಿದ ಮನೆಯಲ್ಲಿ ಅವಳು ಯಾವುದೇ ತರಹದ ಅನುಭವಿಸುವಿಕೆಯನ್ನು ಒದಗಿಸಿಕೊಡುವ ಬಗ್ಗೆ ಅಥವಾ ಅದೇ ತರದ ಬಾಡಿಗೆಯನ್ನು ಸಂದರ್ಭಕ್ಕೆ ಅನುಗುಣವಾಗಿ ಪಾವತಿಸುವುದಕ್ಕೆ ನಿರ್ದೇಶಿಸುವುದು.

ಪರಂತು ಖಂಡ (ಬಿ)ರ ಅಡಿಯಲ್ಲಿ ಯಾವುದೇ ಮಹಿಳೆಯ ವಿರುದ್ಧ ಹೊರಡಿಸತಕ್ಕದ್ದಲ್ಲ.

೨. ಮ್ಯಾಜಿಸ್ಟ್ರೇಟರು ಇತರೆ ಯಾವುದೇ ಹೆಚ್ಚುವರಿ ಷರತ್ತುಗಳನ್ನು ವಿಧಿಸಬಹುದು. ಅಥವಾ ಬಾಧಿತ ವ್ಯಕ್ತಿ ಅಥವಾ ಬಾಧಿತ ವ್ಯಕ್ತಿಯ ಮಗುವನ್ನು ಸಂರಕ್ಷಿಸುವ ಸಲುವಾಗಿ ಸೂಕ್ತ ಹಾಗೂ ಅವಶ್ಯಕ ನಿರ್ದೇಶನವನ್ನು ಮಾಡಬಹುದು.

೩. ಮ್ಯಾಜಿಸ್ಟ್ರೇಟರು ಕೌಟುಂಬಿಕ ಹಿಂಸೆಯನ್ನು ತಡೆಯುವುದಕ್ಕಾಗಿ ಪ್ರತಿವಾದಿಯಿಂದ ಜಾಮೀನು ಅಥವಾ ಜಾಮೀನುರಹಿತ ಮುಚ್ಚಳಿಕೆ ಅವಶ್ಯಗೊಳಿಸಬಹುದು.

೪. ಉಪಕಲಮು (೩)ರಅಡಿಯಲ್ಲಿ ಮಾಡಲಾದ ಆದೇಶವು ದಂಡ ಪ್ರಕ್ರಿಯಾ ಸಂಹಿತೆ ೧೯೭೩ ಅಧ್ಯಾಯ ೮ರಲ್ಲಿ ತಿಳಿಸಿದಂತೆ ಇರತಕ್ಕದ್ದು.

೫. ಉಪಕಲಮು (೧), (೨) ಅಥವಾ (೩)ರಡಿಯಲ್ಲಿ ಆದೇಶ ಹೊರಡಿಸುವ ಪೂರ್ವದಲ್ಲಿ ನ್ಯಾಯಾಲಯವು ಹತ್ತಿರದ ಪೋಲೀಸ್ ಠಾಣೆ ಮೇಲುಸ್ತುವಾರಿ ಅಧಿಕಾರಿಗೆ ಬಾಧಿತ ವ್ಯಕ್ತಿಗೆ ಸಂರಕ್ಷಣೆ ಕೊಡುವುದಕ್ಕಾಗಿ ಅಥವಾ ಅವಳಿಗೆ ನೆರವು ನೀಡುವ ಬಗ್ಗೆ ಅಥವಾ ಅವಳ ಪರವಾಗಿ ಅರ್ಜಿಯನ್ನು ಮಾಡುವವರಿಗೆ ಆದೇಶದ ಜಾರಿ ಮಾಡುವುದಕ್ಕಾಗಿ ನಿರ್ದೇಶನ ನೀಡಬಹುದು.

೬. ಉಪಕಲಮು (೧)ರಡಿಯಲ್ಲಿ ಆದೇಶ ಮಾಡುವಾಗ ಮ್ಯಾಜಿಸ್ಟ್ರೇಟರು ಪ್ರತಿವಾದಿಯ ಮೇಲೆ ಬಾಡಿಗೆ ತೀರಿಸುವ ಬಗ್ಗೆ ಮತ್ತು ಇತರೆ ಹಣ ಪಾವತಿಸುವ ಬಗ್ಗೆ ಷರತ್ತು ವಿಧಿಸಬಹುದು.

೭. ಮ್ಯಾಜಿಸ್ಟ್ರೇಟರು ತನ್ನ ಅಧಿಕಾರ ವ್ಯಾಪ್ತಿಯ ಪೋಲಿಸ್ ಠಾಣೆಯ ಉಸ್ತುವಾರಿ ಅಧಿಕಾರಿಗೆ ಸುರಕ್ಷಿತ ಆದೇಶ ಜಾರಿಮಾಡಲು ಸಹಾಯ ಮಾಡುವಂತೆ ನಿರ್ದೇಶಿಸಬಹುದು.

೮. ಮ್ಯಾಜಿಸ್ಟ್ರೇಟರನು ಪ್ರತಿವಾದಿಗೆ ಬಾಧಿತ ವ್ಯಕ್ತಿಯ ಸ್ವಾಧೀನದ ಅವಳ ಸ್ತ್ರೀಧನ ಅಥವಾ ಇತರೆ ಯಾವುದೇ ಸ್ವತ್ತು ಅಥವಾ ಅವಳು ಹೊಂದಿದ ಬೆಲೆಯುಳ್ಳ ಭದ್ರತೆಯನ್ನು ಹಿಂತಿರುಸುವಂತೆ ನಿರ್ದೇಶಿಸಬಹುದು.

**ಕಲಮು ೨೦. ಆರ್ಥಿಕ/ಹಣಕಾಸಿನ ಪರಿಹಾರಗಳು**

೧. ಕಲಮು ೧೨ ಉಪಕಲಮು (೧)ರಡಿಯಲ್ಲಿ ಸಲ್ಲಿಸಲಾದ ಅರ್ಜಿಯನ್ನು ವಿಲೇವಾರಿ ಮಾಡುವಾ ಮ್ಯಾಜಿಸ್ಟ್ರೇಟರು ಎದುರುದಾರನಿಗೆ ಬಾಧಿತ ವ್ಯಕ್ತಿಯು ವಹಿಸಿದ ವೆಚ್ಚ ಮತ್ತು ಅನುಭವಿಸಿದ ನಷ್ಟವನ್ನು ಸರಿದೂಗಿಸಲು ಮತ್ತು ಬಾಧಿತ ವ್ಯಕ್ತಿಯ ಯಾವುದೇ ಮಗುವು ಕೌಟುಂಬಿಕ ಹಿಂಸೆಯನ್ನು ಪರಿಣಾಮವಾಗಿ ಅನುಭವಿಸಿದ ಬಗ್ಗೆ ಹಣಕಾಸಿನ ಪರಿಹಾರವನ್ನು ನೀಡುವಂತೆ ನಿರ್ದೇಶಿಸಬಹುದು. ಆದರೆ ಅದು ಈ ಕೆಳಗಿನವುಗಳ ಮಿತಿಯಲ್ಲಿರಬಾರದು.

ಎ) ಗಳಿಕೆಯ ನಷ್ಟ.

ಬಿ) ವೈದ್ಯಕೀಯ ವೆಚ್ಚಗಳು

ಸಿ) ಬಾಧಿತ ವ್ಯಕ್ತಿಯ ನಿಯಂತ್ರಣದಿಂದ ಯಾವುದೇ ಆಸ್ತಿಯ ಸ್ಥಳಾಂತರದ ನಾಶ ಅಥವಾ ಹಾನಿಯಿಂದ ಉಂಟಾದ ನಷ್ಟ

ಡಿ) ಬಾಧಿತ ವ್ಯಕ್ತಿ ಮತ್ತು ಅವಳ ಮಕ್ಕಳಿಗಾಗಿ ಜೀವನಾಂಶ ಇದು ಜೀವನಾಂಶದ ಆದೇಶ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರೆ ಕಾನೂನಿನಡಿಯ ಆದೇಶ.

೨. ಈ ಕಲಮಿನಡಿಯಲ್ಲಿ ಮಂಜೂರು ಮಾಡಲಾದ ಹಣಕಾಸಿನ ಪರಿಹಾರವು ಬಾಧಿತ ವ್ಯಕ್ತಿಯ ಮುಕ್ತವಾಗಿ ಮತ್ತು ಯೊಗ್ಯವಾಗಿ ಅವಳು ರೂಢಿಗತವಾಗ ವಾಸಿಸಿಕೊಂಡು ಬಂದ ಜೀವನ ಮಟ್ಟದ ಶೈಲಿಯಲ್ಲಿ ಸಮಂಜಸವಾಗಿರುವ ರೀತಿಯಲ್ಲಿರುತಕ್ಕದ್ದು.

೩. ಮ್ಯಾಜಿಸ್ಟ್ರೇಟರು ಪ್ರಕರಣದ ಸಂದರ್ಭಕ್ಕನುಗುಣವಾಗಿ ಒಂದೇ ಮೊತ್ತದ ಸಂದಾಯದಲ್ಲಿ ಹಣವನ್ನು ಪಾವತಿಸುವಂತೆ ಅಥವಾ ಮಾನಸಿಕವಾಗಿ ಜೀವನಾಂಶದ ಹಣವನ್ನು ಪಾವತಿಸುವ ಬಗ್ಗೆ ಆದೇಶ ಮಾಡುವ ಅಧಿಕಾರ ಹೊಂದಿರತಕ್ಕದ್ದು.

೪. ಮ್ಯಾಜಿಸ್ಟ್ರೇಟರನು ಉಪಕಲಮು (೧)ರಡಿಯಲ್ಲಿ ಮಾಡಲಾದ ಹಣಕಾಸಿನ ಪರಿಹಾರದ ಆದೇಶವನ್ನು ಅರ್ಜಿಯಲ್ಲಿನ ಪಕ್ಷಕಾರರಿಗೆ ಮತ್ತು ಪ್ರತಿವಾದಿಯಾ ವಾಸಿಸುವ ವ್ಯಾಪ್ತಿಯ ಪೋಲಿಸ್ ಠಾಣೆಯ ಮೇಲುಸ್ತುವಾರಿ ಅಧಿಕಾರಿಗೆ ಪ್ರತಿಯನ್ನು ಕಳುಹಿಸಿಕೊಡತಕ್ಕದ್ದು.

೫. ಎದುರುದಾರನು ಬಾಧಿತ ವ್ಯಕ್ತಿಗೆ ಉಪಕಲಮು (೧)ರಡಿಯಲ್ಲಿ ಮಾಡಲಾದ ಹಣಕಾಸಿನ ಪರಿಹಾರದ ಆದೇಶದಲ್ಲಿಳಿತಿದಂತೆ ನಿಗದಿತ ಅವಧಿಯೊಳಗೆ ಹಣವನ್ನು ಪಾವತಿಸಕ್ಕದ್ದು.

೬. ಉಪಕಲಮು (೧)ರಡಿಯಲ್ಲಿ ಮಾಡಲಾದ ಆದೇಶದಂತೆ ಎದುರಾದಾರನು ಹಣವನ್ನು ಪಾವತಿಸದಿದ್ದಲ್ಲಿ, ಮ್ಯಾಜಿಸ್ಟ್ರೇಟರನು ನಿಯೋಜಕನಿಗೆ ಅಥವಾ ಪ್ರತಿವಾದಿಯ ಗೇಣಿದಾರನಿಗೆ ಬಾಧಿತ ವ್ಯಕ್ತಿಗೆ ನೇರವಾಗಿ ಅಥವಾ ನ್ಯಾಯಾಲಯದಲ್ಲಿ ಸಂಬಳವನ್ನು ಅಥವಾ ಮಜೂರಿ ಅಥವಾ ಎದುರುದಾರನ ಬಾಕಿ ಹಣ ಅಥವಾ ಪ್ರಾಪ್ತವಾದ ಹಣವನ್ನು ಪಾವತಿಸಲು ನಿರ್ದೇಶಿಸಬಹುದು.

**ಕಲಮು ೨೧. ಅಭಿರಕ್ಷೆಯ ಆದೇಶಗಳು**

ಚಾಲ್ತಿಯಲ್ಲಿರುವ ಇತರೆ ಯಾವುದೇ ಕಾನೂನಿನಡಿಯಲ್ಲಿ ವಿವರಿಸಲಾದಂತೆ, ಮ್ಯಾಜಿಸ್ಟ್ರೇಟರು ಸಂರಕ್ಷಕ ಆದೇಶಕ್ಕಾಗಿ ಸಲ್ಲಿಸಲಾದ ಅರ್ಜಿಯ ಯಾವುದೇ ಹಂತದ ಚುನಾವಣೆಯ ಸಂದರ್ಭದಲ್ಲಿ ಈ ಕಲಮಿನಡಿಯಲ್ಲಿ ಕೋರಿಕೊಳ್ಳಲಾದ ಬಾಧಿತ ವ್ಯಕ್ತಿಯ ಮಗು/ಮಕ್ಕಳ ತಾತ್ಕಾಲಿಕ ಅಭಿರಕ್ಷೆ ಮಂಜೂರು ಮಾಡುವ ಅಥವಾ ಅವಳ ಪರವಾಗಿ ಯಾವುದೇ ವ್ಯಕ್ತಿ ಅರ್ಜಿಯನ್ನು ಸಲ್ಲಿಸಿದ್ದರೇ, ಅವಶ್ಯಕತೆಯಿದ್ದಲ್ಲಿ ಪ್ರತಿವಾದಿಯು ಆ ಮಗು/ಮಕ್ಕಳನ್ನು ಭೇಟಿ ಮಾಡುವ ಬಗ್ಗೆ ಅನುಕೂಲ ಮಾಡಿಕೊಡಬೇಕು ಪರಂತು ಮ್ಯಾಜಿಸ್ಟ್ರೇಟರನು ಪ್ರತಿವಾದಿಯ ಭೇಟಿಯ ಮಗು/ಮಕ್ಕಳ ಹಿತಾಸಕ್ತಿಗೆ ತೊಂದರೆಯುನ್ನುಂಟು ಮಾಡಬಹುದೆಂಬ ಅಭಿಪ್ರಾಯ ತಳೆದಲ್ಲಿ ಅಂತಹ ಭೇಟಿಯನ್ನು ತಿರಸ್ಕರಿಸತಕ್ಕದ್ದು.

**ಕಲಮು ೨೨. ಪರಿಹಾರದ ಆದೇಶಗಳು**

ಪ್ರತಿವಾದಿಯು ಬಾಧಿತ ವ್ಯಕ್ತಿಗೆ ನೀಡಿದ ಮಾನಸಿಕ ಹಿಂಸೆ, ಉದ್ದೀಪನತೆ ಮತ್ತು ಮಾನಸಿಕ ಆಘಾತ ಹಾಗೂ ಇತರೆ ಕೃತ್ಯಗಳಿಗೆ ಸಂಬಂಧಿಸಿದುದಕ್ಕೆ ಪರಿಹಾರವನ್ನು ಕೊಡಿಸಿಕೊಡುವುದು.

**ಕಲಮು ೨೩. ಮಧ್ಯಾಕಾಲೀನ ಹಾಗೂ ಏಕಪಕ್ಷೀಯ ಆದೇಶಗಳನ್ನು ಹೊರಡಿಸುವ ಅಧಿಕಾರ.**

೧. ಮ್ಯಾಜಿಸ್ಟ್ರೇಟರನು ತನ್ನ ಮುಂದಿರುವ ಯಾವುದೇ ವ್ಯವಹರಣೆಯಲ್ಲಿ ತನಗೆ ಸೂಕ್ತವೆನಿಸುವ ಯಾವುದೇ ಆದೇಶವನ್ನು ಹೊಡಿಸಬಹುದು.

೨. ಒಂದು ವೇಳೆ ಮ್ಯಾಜಿಸ್ಟ್ರೇಟರು ಅರ್ಜಿಯು ಮೇಲ್ನೋಟಕ್ಕೆ ಪ್ರತಿವಾದಿಯು ಗೃಹಕೃತ್ಯದಲ್ಲಿ ಬಾಧಿತ ವ್ಯಕ್ತಿಗೆ ಹಿಂಸೆಪಡಿಸಿರುವೆಂದು ಹಾಗೂ ಹಿಂಸೆ ನೀಡುತ್ತಿರುವನೆಂದು, ಹಿಂಸಿಸುವ ಸಾಧ್ಯತೆಗಳಿವೆಂದು ಸಾಬೀತಾದರೆ, ನಿಗಧಿತ ನಮೂನೆಯಲ್ಲಿ ಸಲ್ಲಿಸಲಾದ ಪ್ರಮಾಣ ಪತ್ರದ ಆಧಾರದ ಮೇಲೆ ಏಕಪಕ್ಷೀಯ ಆದೇಶವನ್ನು ಕಲಮು ೧೮, ೧೯, ೨೦, ೨೧ ಅಥವಾ ೨೨ರಡಿಯಲ್ಲಿ ಆಯಾ ಪ್ರಕರಣಕ್ಕೆ ಅನುಸಾರವಾಗಿ ಆದೇಶವನ್ನು ಹೊರಡಿಸಬಹುದು.

**ಕಲಮು ೨೪.**

ನ್ಯಾಯಾಲಯವು ಆದೇಶದ ಪ್ರತಿಗಳನ್ನು ಉಚಿತವಾಗಿ ಕೊಡುವುದು ಮ್ಯಾಜಿಸ್ಟ್ರೇಟರನು ಈ ಕ್ರಾಂತಿಯಡಿಯಲ್ಲಿ ಮಾಡಲಾದ ಯಾವುದೇ ಆದೇಶದ ಪ್ರತಿಯನ್ನು ಉಚಿತವಾಗಿ ಅರ್ಜಿಯ ಪಕ್ಷಗಾರರಿಗೆ, ಪೋಲಿಸ್‌ಠಾಣೆಯ ಮೇಲ್ವಿಚಾರಕರಿಗೆ ಮತ್ತು ಸ್ಥಳೀಯ ವ್ಯಾಪ್ತಿಯ ಸೇವೆ ಒದಗಿಸುವವರಿಗೆ ಹಾಗೂ ಸೇವೆ ಒದಗಿಸುವವ, ಒಂದು ವೇಳೆ ಕೌಟುಂಬಿಕ ಘಟನಾ ವರದಿಯನ್ನು ನೊಂದಾಯಿಸಿದ್ದರೇ ಅವರಿಗೆ ಪ್ರತಿಯನ್ನು ಉಚಿತವಾಗಿ ಕೊಡುವಂತೆ ಆದೇಶಿಸತಕ್ಕದ್ದು.

**ಕಲಮು ೨೫. ಆದೇಶದ ಅವಧಿ ಮತ್ತು ಮಾರ್ಪಾಡು**

೧. ಕಲಮು ೧೮ರಡಿಯಲ್ಲಿ ಮಾಡಲಾದ ಸಂರಕ್ಷಕ ಆದೇಶವು ಬಾಧಿತ ವ್ಯಕ್ತಿಯು ರದ್ದುಗೊಳಿಸುವಿಕೆಗಾಗಿ ಕೋರಿಕೊಳ್ಳುವವರೆಗೆ ಚಾಲ್ತಿಯಲ್ಲಿರತಕ್ಕದ್ದು.

೨. ಮ್ಯಾಜಿಸ್ಟ್ರೇಟರು ಬಾಧಿತ ವ್ಯಕ್ತಿ/ಪ್ರತಿವಾದಿಯಿಂದ ಅರ್ಜಿಯನ್ನು ಸ್ವೀಕರಿಸಿದ ನಂತರ ಈ ಕಾಯ್ದೆಯಡಿಯಲ್ಲಿ ಮಾಡಲಾದ ಯಾವುದೇ ಆದೇಶದ ಬಗ್ಗೆ ಸಂದರ್ಭಕ್ಕನುಗುಣವಾಗಿ ಮಾರ್ಪಾಡು ತಿದ್ದುಪಡಿ ಅಥವಾ ತೆಗೆದು ಹಾಕುವಿಕೆಯ ಅವಶ್ಯಕತೆ ಇದೆಯೆಂದು ಕಂಡುಕೊಂಡಲ್ಲಿ ಆ ಬಗ್ಗೆ ಸೂಕ್ತ ಕಾರಣಗಳನ್ನು ನಮೂದಿಸಿ ಆದೇಶ ಮಾಡಬಹುದು.

**ಕಲಮು ೨೬. ಇತರೆ ದಾವೆಗಳು ಹಾಗೂ ಕೂಸೂ ವ್ಯವಹರಣೆಗಳಲ್ಲಿಯ ಪರಿಹಾರಗಳು.**

೧. ಕಲಮು ೧೮, ೧೯, ೨೦, ೨೧ ಮತ್ತು ೨೨ರಡಿಯಲ್ಲಿ ದೊರೆಯಬಹುದಾದ ಯಾವುದೇ ಪರಿಹಾರಗಳು ಸಿವಿಲ್ ನ್ಯಾಯಾಲಯ, ಕೌಟುಂಬಿಕ ನ್ಯಾಯಾಲಯ, ಅಥವಾ ಕ್ರಿಮಿನಲ್ ನ್ಯಾಯಾಲಯದ ಮುಂದಿರುವ ಯಾವುದೇ ಕಾನೂನು ವ್ಯವಹರಣೆಗಳು ಈ ಕಾನೂನು ಪ್ರಾರಂಭವಾದ ನಂತರ ಅಥವಾ ಆರಂಭಗೊಳ್ಳುವ ಪೂರ್ವದಲ್ಲಿ ಬಾಧಿತ ವ್ಯಕ್ತಿ ಅಥವಾ ಪ್ರತಿವಾದಿಯನ್ನು ಬಾಧಿಸುವಂತಿದ್ದರೆ ಆ ವ್ಯವಹರಣೆಗಳಲ್ಲಿಯೂ ಇಂತಹ ಪರಿಹಾರಗಳನ್ನು ಕೋರಿಕೊಳ್ಳಬಹುದು.

೨. ಉಪಕಲಮು (೧)ರಡಿಯಲ್ಲಿ ತೋರಿಸಲಾದ ಯಾವುದೇ ಪರಿಹಾರ.

**ಕಲಮು ೨೭. ಅಧಿಕಾರ ವ್ಯಾಪ್ತಿ**

೧. ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯ ಅಥವಾ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟರು ಆಯಾ ಪ್ರಕರಣದ ಸ್ಥಳೀಯ ವ್ಯಾಪ್ತಿಗೆ ಅನುಗುಣವಾಗಿ

ಅ) ಬಾಧಿತ ವ್ಯಕ್ತಿಯು ಶಾಶ್ವತವಾಗಿ ಅಥವಾ ತಾತ್ಕಾಲಿಕವಾಗಿ ವಾಸಿಸುವ ಅಥವಾ ವಹಿವಾಟು ನಡೆಸುವ ಅಥವಾ ಕೆಲಸ ನಿರ್ವಹಿಸುವ ಅಥವಾ

ಬ) ಪ್ರತಿವಾದಿಯು ವಾಸಿಸುವ ಅಥವಾ ವ್ಯವಹಾರ ನಡೆಸುವ ಅಥವಾ ಕೆಲಸ ನಿರ್ವಹಿಸುವ ಅಥವಾ

ಕ) ವ್ಯಾಖ್ಯಾ ಕಾರಣವು ಉದ್ಭವಿಸಿದ ಸ್ಥಳ. ಸಂರಕ್ಷಕರ ಆದೇಶವನ್ನು ಮಂಜೂರು ಮಾಡಲು ಮತ್ತು ಈ ಕಾಯ್ದೆಯಡಿಯಲ್ಲಿ ಇತರೆ ಆದೇಶವನ್ನು ಹೊರಡಿಸುವ ಮತ್ತು ಪ್ರಕರಣವನ್ನು ಒತ್ತಿ ಹಿಡಿಯಲು ಸಕ್ಷಮ ನ್ಯಾಯಾಲಯವಾಗಿರತಕ್ಕದು.

**ಕಲಮು ೨೮. ಪ್ರಕ್ರಿಯೆ**

೧. ಈ ಕಾಯ್ದೆಯಲ್ಲಿ ಅನ್ಯಥಾ ಉಪಬಂಧಿಸದ ಹೊರತು ಕಲಮು ೧೨, ೧೮, ೧೯, ೨೦, ೨೧, ೨೨ ಮತ್ತು ೨೩ರಡಿಯಲ್ಲಿ ಎಲ್ಲಾ ವ್ಯವಹರಣೆಗಳು ಹಾಗೂ ೩೧ನೇ ಕಲಮಿನಡಿಯಲ್ಲಿನ ಅಪರಾಧಗಳು ದಂಡ ಪ್ರಕ್ರಿಯಾ ಸಾಹಿತೆಯ ಉಪಬಂಧಗಳನ್ನು ಅನುಸರಿಸಲ್ಪಡುತ್ತವೆ. ೨. ಉಪ ಕಲಮು (೧) ಇದು ನ್ಯಾಯಾಲಯವು ಕಲಮು ೧೨ ರಡಿಯಲ್ಲಿ ಅಥವಾ ಕಲಮು ೨೩(೩) ರಡಿಯಲ್ಲಿನ ಅರ್ಜಿಯನ್ನು ವಿಲೇ ಪಡಿಸಲು ತನ್ನದೇ ಆದ ಪ್ರಕ್ರಿಯೆಯನ್ನು ಬಳಸಲು ಅಡ್ಡಿಮಾಡತಕ್ಕದ್ದಲ್ಲ.

**ಕಲಮು ೨೯. ಮೇಲ್ಮನವಿ**

ಮ್ಯಾಜಿಸ್ಟ್ರೇಟರು ಹೊರಡಿಸಿದ ಆದೇಶವನ್ನು ಬಾಧಿತ ವ್ಯಕ್ತಿ ಅಥವಾ ಪ್ರತಿವಾದಿಗೆ ಜಾರಿಗೊಳಿಸಿದ ಸಂದರ್ಭನುಸಾರ ಯಾವುದು ತಡವಾಗಿದೆಯೋ ಆ ದಿನಾಂಕದಿಂದ ೩೦ ದಿನಗಳೊಳಗಾಗಿ ಸೆಶನ್ಸ್ ನ್ಯಾಯಾಲಯಕ್ಕೆ ಮೇಲ್ಮನವಿ ಇರತಕ್ಕದ್ದು.

## ಅಧ್ಯಾಯ ೫

## ಸಂಕೀರ್ಣಗಳು

**ಕಲಮು ೩೦. ರಕ್ಷಣಾ ಅಧಿಕಾರಿಗಳು ಹಾಗೂ ಸೇವಾ ನೀಡಿಕೆದಾರರ ಸದಸ್ಯರು ಸಾರ್ವಜನಿಕ ನೌಕರರು.**

ಈ ಕಾಯ್ದೆಯ ಯಾವುದೇ ಉಪಬಂಧಗಳಡಿಯಲ್ಲಿ ಕಾರ್ಯ ನಿರ್ವಹಿಸುವ ಅಥವಾ ಉದ್ದೇಶಿತ ಕಾರ್ಯ ನಿರ್ವಹಿಸುತ್ತಿರುವ ಯಾವುದೇ ಸಂರಕ್ಷಕ ಅಧಿಕಾರಿಗಳು ಮತ್ತು ಸೇವೆ ಒದಗಿಸುವ ಸದಸ್ಯರು ಅಥವಾ ಯಾವುದೇ ನಿಯಮಗಳು ಅಥವಾ ಇದರ ಅಡಿಯಲ್ಲಿ ಮಾಡಿದ ಯಾವುದೇ ಆದೇಶಗಳು ಭಾರತೀಯ ದಂಡ ಸಂಹಿತೆ ಕಲಮು ೨೧ರಡಿಯಲ್ಲಿ "ಸಾರ್ವಜನಿಕ ಸೇವಕ"ರೆಂದು ಕರೆಯಿಸಿಕೊಳ್ಳುತ್ತಾರೆ.

**ಕಲಮು ೩೧. ಪ್ರತಿವಾದಿಯು ಸಂರಕ್ಷಣೆಯ ಆದೇಶವನ್ನು ಉಲ್ಲಂಘಿಸಿದ್ದಕ್ಕಾಗಿ ದಂಡ.**

೧. ಪ್ರತಿವಾದಿಯಿಂದ ಸಂರಕ್ಷಿತ ಆದೇಶದ ಉಲ್ಲಂಘನೆ ಅಥವಾ ಮಧ್ಯಂತರ ಆದೇಶದ ಉಲ್ಲಂಘನೆಯಾದಲ್ಲಿ ಈ ಕಲಮಿನಡಿಯಲ್ಲಿ ಅದು ಅಪರಾಧವೆನಿಸಿಕೊಳ್ಳತಕ್ಕದ್ದು ಮತ್ತು ಅದು ಒಂದು ವರ್ಷದವರೆಗೆ ವಿಸ್ತರಿಸಬಹುದಾದ ಕಾರಾಗೃಹವಾಸದ ಶಿಕ್ಷೆಯಿಂದ ದಂಡಿಸಲ್ಪಡತಕ್ಕದ್ದು ಅಥವಾ ೨೦ ಸಾವಿರ ರೂಪಾಯಿಗಳು ವಿಸ್ತರಿಸಬಹುದಾದ ದಂಡ ಅಥವಾ ಎರಡೂ ಶಿಕ್ಷೆಗೆ ಗುರಿಯಾಗತಕ್ಕದ್ದು.

೨. ಉಪಕಲಮು (೧)ರಡಿಯಲ್ಲಿನ ಅಪರಾಧದ ವ್ಯವಹರಣೆಯು ಯಾವ ಮ್ಯಾಜಿಸ್ಟ್ರೇಟರು ಆದೇಶವನ್ನು ಹೊರಡಿಸುತ್ತಾರೋ ಅವರೇ ನಡೆಸತಕ್ಕದ್ದು.

೩. ಉಪಕಲಮು (೧)ರಡಿಯಲ್ಲಿ ದೋಷಾರೋಪವನ್ನು ರಚಿಸುವಾಗಿ ಮ್ಯಾಜಿಸ್ಟ್ರೇಟರವರು ಭಾರತ ದಂಡ ಸಂಹಿತೆ ಕಲಮು ೪೯೮-ಎ ಅಡಿಯಲ್ಲಿ ಅಥವಾ ಇತರೆ ಯಾವುದೇ ಉಪಬಂಧಗಳಡಿಯಲ್ಲಿ ಅಥವಾ ವರದಕ್ಷಿಣೆ ನಿಷೇಧ ಕಾಯ್ದೆ ೧೯೬೧ ಆಯಾ ಪ್ರಕರಣಕ್ಕೆ ಅನುಗುಣವಾಗಿ ಒಂದು ವೇಳೆ ವಸ್ತು ವಿಷಯವು ಈ ಉಪಬಂಧಗಳಡಿಯಲ್ಲಿ ಅಪರಾಧ ಘಟಿಸಿದೆ ಎಂದು ಬಹಿರಂಗಪಡಿಸಿದ್ದಲ್ಲಿ ಆ ಕಾಯ್ದೆಗಳಡಿಯಲ್ಲಿಯೂ ಮ್ಯಾಜಿಸ್ಟ್ರೇಟರು ದೋಷಾರೋಪವನ್ನು ರಚಿಸಬಹುದು.

**ಕಲಮು ೩೨. ಸಂಜ್ಞೇಯತೆ ಮತ್ತು ರುಜುವಾತು (ಸಾಬೀತು)**

೧. ದಂಡ ಪ್ರಕ್ರಿಯಾ ಸಂಹಿತೆ ೧೯೭೩ರಲ್ಲಿ ಹೇಳಲಾದ ಯಾವುದೇ ವಿಚಾರವು ಕಲಮು ೩೧, ಉಪಕಲಮು ೧ರಡಿಯಲ್ಲಿನ ಅಪರಾಧವು ಸಂಜ್ಞೆಯ ಮತ್ತು ಜಾಮೀನು ರಹಿತವಾಗಿರತಕ್ಕದ್ದು.

೨. ಬಾಧಿತ ವ್ಯಕ್ತಿಯ ಏಕಮಾತ್ರ ಸಾಕ್ಷ್ಯದ ಆಧಾರದ ಮೇಲೆ ನ್ಯಾಯಾಲಯವು ಆರೋಪಿಯು ಕಲಮು ೩೧ರಡಿಯಲ್ಲಿ ಅಪರಾಧ ಎಸಗಿದ್ದಾನೆಯ ಅಭಿಪ್ರಾಯ ತಳೆಯಬಹುದು.

**ಕಲಮು ೩೩. ರಕ್ಷಣಾ ಅಧಿಕಾರಿಯಿಂದ ಕರ್ತವ್ಯ ನಿರ್ವಹಣೆ ಲೋಪಕ್ಕೆ ದಂಡ.**

ಯಾವುದೇ ಸಂರಕ್ಷಕ ಅಧಿಕಾರಿಯು ಮ್ಯಾಜಿಸ್ಟ್ರೇಟರು ರಕ್ಷಣಾ ಆದೇಶವನ್ನು ನಿರ್ವಹಿಸಲು ನಿರ್ದೇಶನ ಮಾಡಿದಾಗ ಅಂತಹ ನಿರ್ದೇಶನವನ್ನು ನಿಭಾಯಿಸಲು ಕರ್ತವ್ಯ ವಿಮುಖನಾದಾಗ ಅಥವಾ ತಿರಸ್ಕರಿಸಿದಾಗ ಅವನು ಒಂದು ವರ್ಷಕ್ಕೆ ವಿಸ್ತರಿಸಬಹುದಾದ ಕಾರಗೃಹವಾಸ ಅಥವಾ ೨೦ ಸಾವಿರ ರೂಪಾಯಿ ದಂಡ ಅಥವಾ ಇವೆರಡನ್ನು ವಿಧಿಸಬಹುದು.

**ಕಲಮು ೩೪. ಸಂರಕ್ಷಕ ಅಧಿಕಾರಿಯು ಮಾಡಿದ ಅಪರಾಧಕ್ಕಾಗಿ ಸಂಜ್ಞೆಯತೆ**

ಸಂರಕ್ಷಕ ಅಧಿಕಾರಿಯ ವಿರುದ್ಧ ಯಾವುದೇ ಕಾನೂನು ವ್ಯವಹಾರಣೆ ಅಥವಾ ಅಭಿಯೋಜನೆಯನ್ನು ಕೈಗೊಳ್ಳಬೇಕಾದಲ್ಲಿ ರಾಜ್ಯ ಸರಕಾರದ ಅಥವಾ ಸರಕಾರದ ಅಧಿಕೃತ ಅಧಿಕಾರಿಯ ಅನುಮತಿ ಪಡೆಯದೇ ಹೂಡತಕ್ಕದ್ದಲ್ಲ.

**ಕಲಮು ೩೫. ಸದ್ಭಾವನೆಯಿಂದ ಮಾಡಿದ ಕೃತ್ಯದ ಸಂರಕ್ಷಣೆ.**

ಸಂರಕ್ಷಕ ಅಧಿಕಾರಿಯ ವಿರುದ್ಧ ಯಾವುದೇ ರೀತಿಯ ಹಾನಿಯಾದ ಬಗ್ಗೆ ಅಥವಾ ಆಗಬಹುದಾದ ಬಗ್ಗೆ ಆತನು ಕರ್ತವ್ಯವನ್ನು ಸದ್ಭಾವನೆಯಿಂದ ಮಾಡಿದಾಗ ಅಥವಾ ಮಾಡುವಾಗ ಅಂತಹದ್ದರ ವಿರುದ್ಧ ಯಾವುದೇ ದಾವೆ ಅಭಿಯೋಜನೆ ಮತ್ತು ಕಾನೂನು ವ್ಯವಹರಣೆ ನಡೆಯತಕ್ಕದ್ದಲ್ಲ.

**ಕಲಮು ೩೬.**

ಈ ಅಧಿನಿಯಮದ ಉಪಬಂಧಗಳು ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರೆ ಕಾನೂನಿನ ಉಪಬಂಧಗಳಿಗೆ ಹೆಚ್ಚುವರಿಯಾಗಿರತಕ್ಕದ್ದು ಹಾಗೂ ಅಲ್ಪೀಕರಿಸತಕ್ಕದ್ದಲ್ಲ.

**ಕಲಮು ೩೭. ಕೇಂದ್ರ ಸರಕಾರ ನಿಯಮಗಳನ್ನು ರಚಿಸುವ ಅಧಿಕಾರ**

೧. ಕೇಂದ್ರ ಸರಕಾರವು ಅಧಿಸೂಚನೆಯ ಮೂಲಕ ಈ ಕಾಯ್ದೆಯಲ್ಲಿನ ಉಪಬಂಧಗಳನ್ನು ರೂಪಿಸಲು ಅವಶ್ಯಕ ನಿಯಮಗಳನ್ನು ರಚಿಸಬಹುದು.

೨. ಈ ಮೇಲಿನ ಅಧಿಕಾರದ ಸಾಮಾನ್ಯತೆಗೆ ಸಾವನ್ಯತೆಗೆ ಧಕ್ಕೆ ಬಾರದ ಹಾಗೆ ಮತ್ತು ವಿಶೇಷವಾಗಿ ಅಂಥ ನಿಯಮಗಳು

ಈ ಕೆಳಗಿನ ಎಲ್ಲಾ ಅಥವಾ ಯಾವುದೇ ವಿಷಯಗಳನು ಒದಗಿಸಬಹುದು. ಅಂದರೆ

ಅ) ಕಲಮು ೮, ಉಪಕಲಮು (೨)ರಡಿಯಲ್ಲಿ ಸಂರಕ್ಷಕ ಅಧಿಕಾರಿಯು ಹೊಂದಿರಬೇಕಾದ ಅರ್ಹತೆಗಳು ಮತ್ತು ಅನುಭವಗಳು.

ಆ) ಕಲಮು ೮, ಉಪಕಲಮು (೩)ರಡಿಯಲ್ಲಿ ಸಂರಕ್ಷಕ ಅಧಿಕಾರಿಯ ಹಾಗೂ ಆತನ ಅಧೀನ ಅಧಿಕಾರಿಗಳ ಸೇವೆಯ ಷರತ್ತು ಮತ್ತು ನಿಬಂಧನೆಗಳು.

ಇ) ಕಲಮು ೯, ಉಪಕಲಮು (೧) ಖಂಡಿಕೆ (ಬಿ)ರಡಿಯಲ್ಲಿ ಕೌಟುಂಬಿಕ ಘಟನಾ ವರದಿ ತಯಾರಿಕೆಯ ನಮೂನೆ ಹಾಗೂ ರೀತಿ.

ಈ) ಕಲಮು ೯, ಉಪಕಲಮು (೧) ಖಂಡಿಕೆ (ಸಿ)ರಲಡಿಯಲ್ಲಿ ಸಂರಕ್ಷಿತ ಆದೇಶ ಪಡೆಯುವ ಸಲುವಾಗಿ ಮ್ಯಾಜಿಸ್ಟ್ರೇಟರಿಗೆ ಸಲ್ಲಿಸಬಹುದಾದ ಅರ್ಜಿಯ ನಮೂನೆ ಮತ್ತು ರೀತಿ.

ಉ) ಕಲಮು ೯, ಉಪಕಲಮು (೧) ಖಂಡಿಕೆಯಡಿಯಲ್ಲಿ ನಿಲ್ಲಿಸಬಹುದಾದ ದೂರಿನ ನಮೂನೆ.

ಊ) ಕಲಮು ೯, ಉಪಕಲಮು (೧) ಖಂಡಿಕೆ (ಡಿ)ರಡಿಯಲ್ಲಿ ಸಂರಕ್ಷಿತ ಅಧಿಕಾರಿಯು ನಿರ್ವಹಿಸಬಹುದಾದ ಇತರೆ ಕರ್ತವ್ಯಗಳು.

ಋ) ಕಲಮು ೧೦, ಉಪಕಲಮು (೧)ರಡಿಯಲ್ಲಿ ಸೇವೆ ಒದಗಿಸುವವರ ನೊಂದಾಣಿಗೆ ಸಂಬಂಧಿಸಿದ ನಿಯಮಗಳ ನಿಯಂತ್ರಣಕ್ಕಾಗಿ

ೠ) ಈ ಕಾಯ್ದೆಯಡಿಯಲ್ಲಿನ ಕಲಮು ೧೨, ಉಪಕಲಮು (೧)ರಡಿಯಲ್ಲಿ ಸಲ್ಲಿಸುವ ಅರ್ಜಿಯ ನಮೂನೆ ಹಾಗೂ ಅರ್ಜಿಯು ಈ ಕಲಮಿನ ಉಪಕಲಮು (೩)ರಡಿಯಲ್ಲಿ ಹೊಂದಿರಬೇಕಾದ ವಿವರಗಳು.

ಎ) ಕಲಮು ೧೩, ಉಪಕಲಮು (೧)ರಡಿಯಲ್ಲಿ ನೋಟೀಸು ಜಾರಿ ಮಾಡುವ ವಿಧಾನ.

ಏ) ಕಲಮು ೧೩, ಉಪಕಲಮು (೨)ರಡಿಯಲ್ಲಿ ಸಂರಕ್ಷಕ ಅಧಿಕಾರಿಯು ನೋಟೀಸು ಜಾರಿಗೆ ಮಾಡುವ ಬಗ್ಗೆ ಮಾಡಲಾದ ಘೋಷಣೆಯ ನಮೂನೆ.

ಐ) ಕಲಮು ೧೪, ಉಪಕಲಮು (೧)ರಡಿಯಲ್ಲಿ ಸೇವೆ ಒದಗಿಸುವ ಸದಸ್ಯನು ಸಂದಾನಕಾರರಾಗಿ ಹೊಂದಿರಬೇಕಾದ ಅರ್ಹತೆ ಮತ್ತು ಅನುಭವ.

ಒ) ಕಲಮು ೨೩, ಉಪಕಲಮು ೨ರಡಿಯಲ್ಲಿ ಬಾಧಿತ ವ್ಯಕ್ತಿಯು ಸಲ್ಲಿಸಬಹುದಾದ ಪ್ರಮಾಣ ಪತ್ರದ ನಮೂನೆ.

ಓ) ನಿಗದಿಪಡಿಸಬಹುದಾದ ಇತರೆ ಯಾವುದೇ ವಿಷಯಗಳು.

೩. ಈ ಕಾಯ್ದೆಯಡಿಯಲ್ಲಿ ಮಾಡಲಾದ ಪ್ರತಿಯೊಂದು ನಿಯಮಗಳನ್ನು ನಿಯಮ ರೂಪಿಸಿದ ಕೂಡಲೇ ಪ್ರತಿ ಸದನದ ಮುಂದೆ ಈ ಅಧಿವೇಶನ ಅಥವಾ ಎರಡು ಅಧೀವೇಶನ ಅಥವಾ ಅದಕ್ಕಿಂತ ಹೆಚ್ಚು ಸತತವಾಗಿ ನಡೆಯುವ ಅಧಿವೇಶನಗಳು, ಅಧಿವೇಶನ ಅಂತ್ಯಗೊಳ್ಳುವ ಮೊದಲು ಮೇಲೆ ಹೇಳಲಾದ ಅಧಿವೇಶನದಲ್ಲಿ ಮಂಡಿಸತಕ್ಕದ್ದು, ಉಭಯ ಸದನಗಳು ಇಂತಹ ನಿಯಮ ಮಾರ್ಪಾಡು ಮಾಡಲು

ಒಪ್ಪಿದ್ದಲ್ಲಿ ಮಾರ್ಪಾಡುಗೊಳಿಸತಕ್ಕದ್ದು. ಮಾರ್ಪಾಡು ಮಾಡಬಾರದೆಂದಾದಲ್ಲಿ ಆ ನಿಮಯ ಮಾರ್ಪಾಡು ರಹಿತವಾಗಿ ಕಾರ್ಯರೂಪಿತವಾಗತಕ್ಕದ್ದು. ಈ ಹಿಂದೆ ಮಾಡಲಾದ ನಿಯಮಗಳಿಗೆ ಧಕ್ಕೆ ಬಾರದಂತೆ ಇರತಕ್ಕದ್ದು. ಮತ್ತು ಈ ಕಾಯ್ದಿದೆಯು ಒಟ್ಟು ೧೭ ನಿಯಮಗಳನ್ನು ಒಳಗೊಂಡಿದೆ.

ಒಟ್ಟಿನಲ್ಲಿ ಈ ಕಾಯಿದೆಯು ಕುಟುಂಬದಲ್ಲಿ ಮಹಿಳೆಯರು ಅನುಭವಿಸುತ್ತಿರುವ ಹಿಂಸೆಯನ್ನು ತಡೆಯುವಲ್ಲಿ ಮತ್ತು ಮಹಿಳೆಯರಿಗೆ ಒಂದು ನೈತಿಕವಾದ ಬೆಂಬಲವನ್ನು ನೀಡಿದೆ ಎಂದು ಹೇಳಬಹುದು. ಈ ಕಾಯಿದೆಯ ಸಂಪೂರ್ಣವಾದ ಮಾಹಿತಿಯನ್ನು ಹೆಂಗಸರ ಹಕ್ಕಿನ ಸಂಘವು ಪ್ರಕಟಿಸಿದ ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ರಕ್ಷಣಾ ಅಧಿನಿಯಮ-೨೦೦೫ ಮತ್ತು ಕೆ.ದಾದಾಪೀರ್ ಅವರು ಪ್ರಕಟಿಸಿದ "ಹೆಣ್ಣು ಮಕ್ಕಳನ್ನು ಕೌಟುಂಬಿಕ ಹಿಂಸೆಯಿಂದ ಸಂರಕ್ಷಿಸುವ ಕಾಯ್ದೆ -೨೦೦೫" ಪುಸ್ತಕದಿಂದ ಆಯ್ದುಕೊಳ್ಳಲಾಗಿದೆ.

## ಅಧ್ಯಾಯ ೪

## ಕೌಟುಂಬಿಕ ಹಿಂಸೆಗೆ ಸಂಬಂಧಿಸಿದ ಪ್ರಕರಣ ಅಧ್ಯಯನಗಳು

ಯಾವುದೇ ಒಂದು ಸಂಶೋಧನೆಯಲ್ಲಿ ಪ್ರಕರಣ ಅಧ್ಯಯನ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಭಾರತದ ಸಂವಿಧಾನವು ೨೦೦೫ರಲ್ಲಿ ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ಸಂರಕ್ಷಣಾ ಅಧಿನಿಯಮವನ್ನು ಜಾರಿಗೆ ತಂದಿದೆ. ಆದರೆ ಈ ನಿಯಮದ ಬಗ್ಗೆ ಜನರಲ್ಲಿ ಮುಖ್ಯವಾಗಿ ಮಹಿಳೆಯರಲ್ಲಿ ಅರಿವು ಇದೆಯೇ ಎಂಬುದನ್ನು ತಿಳಿಯಬೇಕೆಂದರೆ ಕ್ಷೇತ್ರಕಾರ್ಯದ ಮೂಲಕ ಪ್ರಕರಣಗಳನ್ನು ದಾಖಲಿಸುವುದು ಉತ್ತಮವಾಗಿರುತ್ತದೆ. ಹಾಗಾಗಿ ಪ್ರಕರಣಗಳನ್ನು ಅಧ್ಯಯನ ಮಾಡಲಾಗಿದೆ ಮತ್ತು ಇದರಿಂದ ವಾಸ್ತವ ಅಂಶಗಳು ನಮಗೆ ಗೋಚರಿಸುತ್ತವೆ. ಮತ್ತು ಮಹಿಳೆಯರು ಯಾವ ಯಾವ ರೀತಿಯಲ್ಲಿ ಹಿಂಸೆಯನ್ನು ಅನುಭವಿಸುತ್ತಿದ್ದಾರೆ ಎಂಬುದನ್ನು ತಿಳಿಯುವುದು ಮುಖ್ಯವಾಗಿದೆ. ಮಹಿಳೆಯರಿಗೆ ಈ ಕಾಯಿದೆಯ ಬಗ್ಗೆ ಅರಿವು ಇದೆಯೇ ಅಥವಾ ಇಲ್ಲವೋ ಎಂಬುದನ್ನು ತಿಳಿಯುವುದರ ಜೊತೆಗೆ ಈ ಕಾಯಿದೆ ಮಹಿಳೆಯರಿಗೆ ಎಷ್ಟು ಸಹಕಾರಿಯಾಗಿದೆ ಎಂಬುದರ ನಿಟ್ಟಿನಲ್ಲಿ ಪ್ರಕರಣ ಅಧ್ಯಯನ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಈ ನಿಟ್ಟಿನಲ್ಲಿ ಅಧ್ಯಯನ ಕ್ಷೇತ್ರವಾದ ಕಮಲಾಪುರ ಪಟ್ಟಣದಲ್ಲಿನ ಮಹಿಳೆಯರ ಅನುಭವಗಳನ್ನು ಅವರ ಮಾತಿನಲ್ಲಿಯೇ ಹಿಡಿದಿಡುವ ಕೆಲಸವನ್ನು ಮಾಡಲಾಗಿದೆ. ಅಂತಹ ಅನುಭವಗಳನ್ನು ಪ್ರಕರಣಗಳ ಮೂಲಕ ಈ ಕೆಳಗಿನಂತೆ ವಿವರಿಸಲಾಗಿದೆ.

**ಪ್ರಕರಣ ೧.**

ಹೊಸಪೇಟೆ ತಾಲೂಕಿನ ಕಮಲಾಪುರ ಪಟ್ಟಣದ ೧ನೇ ವಾರ್ಡ್ (ಪಟ್ಟಾಭಿರಾಮ ಕ್ಯಾಂಪ್)ನಲ್ಲಿ ವಾಸಿಸುತ್ತಿರುವ ನೀಲಾವತಿಯವರು ಕುಟುಂಬದಲ್ಲಿನ ಹಿಂಸೆಯಿಂದಾಗಿ ಬೇಸತ್ತು ಹೋಗಿದ್ದಾಳೆ. ಇವರಿಗೆ ಸುಮಾರು ೩೦ವರ್ಷ ವಯಸ್ಸಾಗಿದ್ದು ಮೂರು ಹೆಣ್ಣು ಮತ್ತು ಇಬ್ಬರು ಗಂಡು ಮಕ್ಕಳನ್ನು ಹೊಂದಿದ್ದಾರೆ. ಇವರ ಗಂಡನ ಹೆಸರು ಹುಲುಗಪ್ಪ. ನೀಲಾವತಿಯವರು ಕುಟುಂಬದಲ್ಲಿ ಯಾವ ರೀತಿ ಹಿಂಸೆಯನ್ನು ಅನುಭವಿಸುತ್ತಿದ್ದಾರೆ ಎಂಬುದನ್ನು ಅವರ ಮಾತಿನಲ್ಲಿಯೇ ತಿಳಿಯಬಹುದಾಗಿದೆ. ಅವರೇ ಹೇಳುವಂತೆ "ಸಾರ್ ನನಗೆ ಚಿಕ್ಕವಯಸ್ಸಿನಲ್ಲಿಯೇ ಮದುವೆ ಮಾಡಿಕೊಟ್ಟಿದ್ದಾರೆ. ಮದುವೆಯಾದಾಗಿನಿಂದ ಹಿಡಿದು ಇಲ್ಲಿವರೆಗೂ ಗಂಡನಿಂದ ಹೊಡೆಸಿಕೊಂಡೇ ಬಂದಿದ್ದೇನೆ. ಸಾರ್ ನನ್ನ ಗಂಡ ತುಂಬಾ ಕುಡಿಯುತ್ತಾನೆ. ಅವನಿಗೆ ಕುಡಿಯೋಕೆ ಟೈಮು ಇಲ್ಲ ಯಾವಾಗ ಬೇಕಾದರೂ ಆವಾಗ ಕುಡಿದುಬಿಡುತ್ತಾನೆ. ಕುಡಿದ ಮೇಲೆ

ಮನೆಗೆ ಬಂದು ಹೊಡಿತಾನೆ. ದಿನಾಲು ಇದು ಇದ್ದದ್ದೇ ಸಾರ್ ಏನ್ ಮಾಡೋದು ನಮ್ ಕರ್ಮ. ನನ್ನ ಹಣೆಬರಹದಲ್ಲಿ ಏನ್ ಬರೆದಿದೆಯೋ ಹಾಗೆ ಆಗುತ್ತೆ. ಮನೆಯಲ್ಲಿ ಹೊಡೆಯಿಸಿಕೊಂಡು ತವರು ಮನೆಗೆ ಸಾಕಷ್ಟು ಸಾರಿ ಬಂದಿದ್ದೇನೆ. ತವರು ಮನೆಯಲ್ಲಿ ನನ್ನ ತಮ್ಮಂದಿರು ಚೆನ್ನಾಗಿಯೇ ನೋಡಿಕೊಳ್ಳುತ್ತಾರೆ. ಆದರೆ ಎಷ್ಟು ದಿನ ಅಂತ ತವರು ಮನೆಯಲ್ಲಿ ಇರೋದಕ್ಕೆ ಆಗುತ್ತೆ ಸಾರ್. ಹಂಗಾಗಿ ಮತ್ತೆ ಗಂಡನ ಮನೆಗೆ ಹೋಗುತ್ತಿದ್ದೆ. ನಮ್ಮ ತಮ್ಮಂದಿರು ನನ್ನ ಗಂಡನಿಗೆ ಸಾಕಷ್ಟು ಸಾರಿ ಹೊಡೆದು ಬುದ್ದಿವಾದ ಹೇಳಿದ್ದಾರೆ. ಆದರೆ ಅವನು ತನ್ನ ಚಾಳಿಯನ್ನು ಇನ್ನೂ ಬಿಟ್ಟಿಲ್ಲ. ನನಗೆ ೫ಜನ ಮಕ್ಕಳು ಇವರಲ್ಲಿ ಇಬ್ಬರು ಹುಡುಗಿಯರನ್ನು ಕೆಲಸಕ್ಕೆ ಕಳುಹಿಸುತ್ತೇನೆ. ನಾನೂ ಕೂಡ ಕೆಲಸಕ್ಕೆ ಹೋಗುತ್ತೇನೆ. ಇನ್ನು ಮೂವರು ಮಕ್ಕಳು ಚಿಕ್ಕವರಿದ್ದಾರೆ. ಅವರು ಮನೆಯಲ್ಲಿಯೇ ಇರುತ್ತಾರೆ. ನನ್ನ ಅತ್ತೆ ಮಾವಂದಿರು ಇಲ್ಲ. ಗಂಡ ಏನೂ ಕೆಲಸ ಮಾಡೋದಿಲ್ಲ. ನಾವು ದುಡಿದು ತಂದಿದ್ದರಲ್ಲೇ ಅವನೂ ಕೂಡ ತಿಂತಾನೆ, ಕುಡಿತಾನೆ. ಕಮಲಾಪುರದ ಟಾಕೀಸ್ ಪಕ್ಕದಲ್ಲಿ ಒಂದು ಚಿಕ್ಕ ಗುಡಿಸಲು ಇದೆ ಸಾರ್ ಅಲ್ಲೇ ಇರುತ್ತೇವೆ. ಈಗ ಅದನ್ನೂ ಮಾರಲು ಹೊರಟಿದ್ದಾನೆ. ಮೊನ್ನೆ ನನ್ನ ಇಬ್ಬರು ಮಕ್ಕಳು ಬೇಲ್ದಾರ್ ಕೆಲಸಕ್ಕೆ ಹೋಗಿದ್ದರೆ ಅಲ್ಲಿಗೆ ಹೋಗಿ ಅವರನ್ನು ಹೊಡೆದು ಅವರ ಕೂಲಿಯನ್ನು ಕಸಿದುಕೊಂಡು ಕುಡಿಯೋಕೆ ಬಳಸಿದ್ದಾನೆ ಸಾರ್. ಮತ್ತೆ ನಾನು ರೊಕ್ಕ ಉಳಿಸಬೇಕು ಅಂತ ಹೇಳಿ ಮಾಬುಸುಬಾನಿ ಸ್ತ್ರೀ ಶಕ್ತಿ ಸಂಘಕ್ಕೆ ಸೇರಿದ್ದೇನೆ. ಅಲ್ಲಿ ನಾನು ೩೦,೦೦೦ರೂಪಾಯಿಗಳನ್ನು ಸಾಲ ತೆಗೆದುಕೊಂಡಿದ್ದೇನೆ. ಈ ದುಡ್ಡಿನಿಂದ ಮಕ್ಕಳಿಗೆ ಬಂಗಾರದ ಸಾಮಾನುಗಳನ್ನು ತಂದಿದ್ದೇನೆ. ಆದರೆ ಈ ಬಂಗಾರದ ಸಾಮಾನುಗಳನ್ನು ಸಹ ಕಿತ್ತುಕೊಂಡು ಹೋಗಿ ಮಾರಿಕೊಂಡು ತಿಂದಿದ್ದಾನೆ. ಈಗ ನನಗೆ ೬ ತಿಂಗಳು. ಈಗಲೂ ಕೂಡ ಹೊಡೆದಿದ್ದಾನೆ. ನೋಡಿ ಸಾರ್ ಎಂದು ತನ್ನ ಕಣ್ಣನ್ನು ತೋರಿಸಿದಳು. ಒಂದು ಕಣ್ಣಿನಲ್ಲಿ ರಕ್ತ ಹೆಪ್ಪುಗಟ್ಟಿ ಸಂಪೂರ್ಣವಾಗಿ ಕೆಂಪಾಗಿತ್ತು. ದಿನಾಲು ಕೈಗೆ ಏನು ಸಿಗುತ್ತೋ ಅದರಿಂದ ಹೊಡೆಯುತ್ತಾನೆ ಸಾರ್, ಮಕ್ಕಳಿಗೂ ಹೊಡಿತಾನೆ ಎಂದು ಹೇಳಿದರು. ಇದರಿಂದ ಬೇಜಾರಾಗಿ ಎಣ್ಣೆ ಕುಡಿದು ಅಥವಾ ಕಾಲುವೆಗೆ ಬಿದ್ದು ಸಾಯಬೇಕು ಅನ್ನುತ್ತೆ ಸಾರ್. ಆದರೆ ಮಕ್ಕಳ ಮುಖ ನೋಡಿ ಹಂಗೇ ಜೀವನ ಮಾಡುತ್ತಾ ಇದ್ದೀನಿ ಎಂದು ಹೇಳಿ ತಮ್ಮ ರೋಧನವನ್ನು ತೋಡಿಕೊಂಡರು.

ಕೌಟುಂಬಿಕ ಹಿಂಸೆ ತಡೆ ಕಾಯಿದೆ ಬಗ್ಗೆ ನಿಮಗೆ ತಿಳಿದಿದೆಯೇ? ಎಂದು ಪ್ರಶ್ನಿಸಿದಾಗ. ಹಂಗಂದ್ರೆ ಏನು ಸಾರ್. ಅದರ ಬಗ್ಗೆ ಗೊತ್ತೇ ಇಲ್ಲ ಎಂದರು. ಈ ಕಾಯಿದೆಯ ಬಗ್ಗೆ ತಿಳಿ ಹೇಳಿದಾಗಲೂ ಸಹ ಅವರಿಂದ ನೀರಸ ಪ್ರತಿಕ್ರಿಯೆ ಬಂದಿತು. ಅಂದರೆ "ಇದೆಲ್ಲ ನಮಗೆಲ್ಲ ಏನ್ ಗೊತ್ತಾಗಬೇಕು ಸಾರ್, ನನಗೆ ಓದಾಕು ಬರಲ್ಲ, ಬರೆಯಾಕು ಬರಲ್ಲ, ಮತ್ತೆ ಪೋಲೀಸ್ ಸ್ಟೇಷನ್‌ಗೆ ಹೋಗಿ ಕಂಪ್ಲೆಂಟ್ ಕೊಟ್ಟರೆ ನನ್ ಕಷ್ಟ ಬಗೆಹರಿಯಲ್ಲ ಸಾರ್ ಬರೀ ರೊಕ್ಕ ಖರ್ಚು ಅಷ್ಟೆ. ಮತ್ತೆ ಗಂಡನಿಂದ ಹೊಡೆಯಿಸಿಕೊಳ್ಳೋದಂತೂ ತಪ್ಪಲ್ಲ ಸಾರ್" ಎಂದರು. ಹಾಗೆಯೇ ಇದು ನಮ್ ಹಣೆಬರಹ ಸಾರ್ ಯಾರ್ ಏನ್ ಮಾಡೋದು ಅನುಭವಿಸಬೇಕು ಅಷ್ಟೇ. ಈಗ ನನಗೆ ೬ ತಿಂಗಳು ಇರೋದರಿಂದ ತವರು ಮನೆಗೆ ಬಂದೀನಿ ಮಕ್ಕಳು

ಕೆಲಸಕ್ಕೆ ಹೋಗಿದ್ದಾರೆ. ಆದರೂ ಗಂಡ ಇಲ್ಲಿಗೇ ಕುಡಿದುಬಂದು ಬೈಯುತ್ತಾನೆ ಸಾರ್. ಏನು ಮಾಡೋದು ಕಟ್ಟಿಕೊಂಡಿನಿ ಅಂದ್ಮೇಲೆ ಅನುಭವಿಸಬೇಕು ಅಷ್ಟೇ ಎಂದು ಹೇಳಿದರು.

ಪ್ರಕರಣ ೨.

ಸುಮಾರು ೩೦ ವರ್ಷದ ಗಂಗಮ್ಮ ಕಮಲಾಪುರ ಪಟ್ಟಣದ ಕುಪ್ಪಯ್ಯ ಕ್ಯಾಂಪ್‌ನಲ್ಲಿ ವಾಸವಾಗಿದ್ದಾರೆ. ಈಗ ಇವರು ವಾಸಿಸುವ ಮನೆಯಲ್ಲಿ ೪ಜನ ಸದಸ್ಯರು ಇದ್ದಾರೆ. ಇವರಲ್ಲಿ ಅವರ ತಂದೆ ತಾಯಿ ಮತ್ತು ಮಗ ಇದ್ದಾರೆ. ಇವರು ಕುಟುಂಬದಲ್ಲಿ ಯಾವ ರೀತಿಯ ಹಿಂಸೆಯನ್ನು ಅನುಭವಿಸುತ್ತಿದ್ದಾರೆ ಎಂಬುದನ್ನು ಅವರ ಮಾತಿನಲ್ಲಿಯೇ ತಿಳಿಯಬಹುದಾಗಿದೆ. “ಸಾರ್ ನನ್ನ ತವರು ಮನೆ ಕಮಲಾಪುರ. ನನ್ನ ಗಂಡನ ಮನೆ ಕೊಪ್ಪಳ. ನಾನು ಅಲ್ಲೇ ಇದ್ದೆ ಆದರೆ ನನ್ನ ಗಂಡ ತೀರಿಕೊಂಡು ೧೫ವರ್ಷಗಳಾದವು. ಆವಾಗಿನಿಂದ ನಾನು ತವರು ಮನೆಗೇ ಬಂದುಬಿಟ್ಟೆ. ಇಲ್ಲಿ ನಮ್ಮ ಅಪ್ಪ ಅಮ್ಮನವರನ್ನು ನೋಡಿಕೊಳ್ಳಲು ಯಾರೂ ಇಲ್ಲ. ಹಂಗಾಗಿ ನಾನೂ ಇಲ್ಲಿಗೆ ಬಂದೆ. ಗಂಡನ ಮನೆಯಲ್ಲಿ ಮೈದುನರು ಬಹಳ ಕಾಟ ಕೊಡುತ್ತಿದ್ದರು. ಕೆಲವು ಸಾರಿ ಹೊಡೆದಿದ್ದಾರೆ ಕೂಡ. ಅಲ್ಲಿ ನನ್ನ ಗಂಡನ ಹೆಸರಿನಲ್ಲಿ ಒಂದು ಜಾಗ ಇತ್ತು. ಆ ಜಾಗವನ್ನು ನನಗೆ ಗೊತ್ತಿಲ್ಲದಂತೆ ಮಾರಿಕೊಂಡು ತಿಂದಿದ್ದಾರೆ. ಅದನ್ನು ಕೇಳಿದರೆ ಕೊಡುವುದಿಲ್ಲ ಎಂದರು. ನಾನೊಬ್ಬಳೇ ಒಂಟಿ ಹೆಂಗಸು ಅವರಿಗೆ ಎದುರು ಹಾಕಿಕೊಳ್ಳೋದು ಹೇಗೆ ಎಂದು ಹೇಳಿ ಸುಮ್ಮನಾಗಿಬಿಟ್ಟೆ ಎಂದರು. ಈ ಕಾಯಿದೆಯ ಬಗ್ಗೆ ಕೇಳಿದರೆ, ಸಾಕಷ್ಟು ಕಾನೂನುಗಳ ಇದಾವೆ ಸಾರ್ ಅದನ್ನು ಯಾರು ಪಾಲುಸ್ತಾರೆ. ನಾನು ಕಂಪ್ಲೇಂಟ್ ಕೊಟ್ಟರೆ ಮತ್ತೆ ಬರೀ ದುಡ್ಡು ಖರ್ಚು, ನಾನು ಬೇರೆ ಕೂಲಿ ಮಾಡಿಕೊಂಡು ತಿನ್ನಬೇಕು. ಅಷ್ಟೊಂದು ರೊಕ್ಕ ಖರ್ಚು ಮಾಡಾಕಾಗಲ್ಲ ಎಂದರು.

ನೀವು ಸಂಘಗಳನ್ನು ಕಟ್ಟಿಕೊಂಡೀರಾ? ಮನೆಯ ವ್ಯವಹಾರವನ್ನೆಲ್ಲಾ ನೋಡಿಕೊಳ್ಳೋರು ಯಾರು? ಎಂದು ಪ್ರಶ್ನಿಸಲಾಯಿತು. “ಮನೆಯಲ್ಲಿ ನಾವು ನಾಲ್ಕೇ ಜನ ಇರೋದು ಅಪ್ಪ ಅಮ್ಮನಿಗೆ ವಯಸ್ಸಾಗಿದೆ. ಮನೆಯಲ್ಲಿನ ಎಲ್ಲಾ ವ್ಯವಹಾರಗಳನ್ನು ನಾನೇ ನೋಡಿಕೊಳ್ಳುತ್ತೇನೆ. ಇಬ್ಬರು ಅಣ್ಣಂದಿರು ಅಂಬೇಡ್ಕರ್ ಕಾಲೋನಿಯಲ್ಲಿ ಇದ್ದಾರೆ. ಅವರು ಈ ಕಡೆ ತಿರುಗಿಯೂ ನೋಡುವುದಿಲ್ಲ. ಮತ್ತೆ ಅಣ್ಣಂದಿರ ಹೆಂಡತಿಯರು ತುಂಬಾ ಕಾಟ ಕೊಡುತ್ತಾರೆ. ಹಂಗಾಗಿ ನಾವು ಅಲ್ಲಿಗೆ ಹೋಗೋದಿಲ್ಲ ಮತ್ತೆ ಅವರು ಇಲ್ಲಿಗೆ ಬರೋದಿಲ್ಲ ಸಾರ್ ಎಂದರು. ಮತ್ತೆ ಮುಂದುವರೆಸಿ ಇಲ್ಲೇ ನೇತ್ರಾವತಿ ಸ್ತ್ರೀ ಶಕ್ತಿ ಸಂಘಕ್ಕೆ ಸೇರಿದ್ದೇನೆ ಸಾರ್ ವಾರಕ್ಕೆ ೧೦೦ ರೂಪಾಯಿಯಂತೆ ಕಟ್ಟುತ್ತಾ ಇದ್ದೇನೆ, ಇಲ್ಲಿ ನಮಗೆ ಒಂದು ಶಾಶ್ವತವಾದ ಸ್ಥಾನ ಇಲ್ಲ ಸಾರ್ ಎಂದು ಹೇಳಿದರು. ಇಲ್ಲಿ ಮುಖ್ಯವಾಗಿ ಗಂಡ ಸತ್ತ ನಂತರ ಇವರಿಗೆ ಬರುವ ಆಸ್ತಿ ಇವರಿಗೆ ದಕ್ಕಲಿಲ್ಲ. ಹಾಗಾಗಿ ಇವರು ಬೀದಿಪಾಲಾಗಿರುವುದು ಮತ್ತು ಇವರಿಗೆ ಒಂದು ಶಾಶ್ವತವಾದ ನೆಲೆ ಇಲ್ಲದಿರುವುದು ಕಂಡುಬರುತ್ತದೆ.

ಪ್ರಕರಣ ೩.

ಕಮಲಾಪುರದ ಪಟ್ಟಣದ ೧ನೇ ವಾರ್ಡ್ ಆದ ಪಟ್ಟಾಭಿರಾಮ ಕ್ಯಾಂಪ್‌ನಲ್ಲಿ ವಾಸವಾಗಿರುವ

ದೇವೇಂದ್ರಮ್ಮ. ನಾಯಕ ಜನಾಂಗಕ್ಕೆ ಸೇರಿದವರಾಗಿದ್ದಾರೆ. ಇವರಿಗೆ ಸುಮಾರು ೨೫ವರ್ಷ ವಯಸ್ಸು. ಇವರಿಗೆ ಇಬ್ಬರು ಗಂಡು ಮಕ್ಕಳು. ಇವರ ಗಂಡನ ಹೆಸರು ಗಂಗಾಧರ. ದೇವೇಂದ್ರಮ್ಮನವರಿಗೆ ಚಿಕ್ಕವರಿದ್ದಾಗಲೇ ವಿವಾಹವಾಗಿದೆ. ಅಂದರೆ ಬಾಲ್ಯವಿವಾಹವಾಗಿದೆ. ಆದರೆ ಗಂಡ ಗಂಗಾಧರ ಈಗ ಇವರ ಜೊತೆಯಲ್ಲಿಲ್ಲ. ಏಕೆಂದರೆ ದೇವೇಂದ್ರಮ್ಮನನ್ನು ಬಿಟ್ಟು ೨ ವರ್ಷಗಳಾಗಿವೆ. ಈಗ ಒಂಟಿಯಾಗಿ ಜೀವಿಸುತ್ತಿದ್ದಾರೆ. ಇವರ ನೋವುಗಳನ್ನು ಈ ಕೆಳಗಿನಂತೆ ವಿವರಿಸುತ್ತ ಹೋದರು. ನನಗೆ ಮದುವೆಯಾಗಿ ಸ್ವಲ್ಪ ದಿನಗಳ ಕಾಲ ಚೆನ್ನಾಗಿಯೇ ಇದ್ದಿವಿ ಸಾರ್, ಆ ಮೇಲೆ ಒಂದು ಗಂಡು ಮಗು ಆಯ್ತು ಆವಾಗಲೂ ಚೆನ್ನಾಗಿಯೇ ನೋಡಿಕೊಳ್ಳುತ್ತಿದ್ದ. ದಿನಾಲು ಕುಡಿದು ಬರುತ್ತಿದ್ದ ಸಣ್ಣ ಪುಟ್ಟ ಜಗಳಗಳು ನಡಿಯುತ್ತಿದ್ದವು. ಆದರೆ ಅವನಿಗೆ ಯಾವ ಕೆಲಸನೂ ಇರಲಿಲ್ಲ ಸಾರ್. ಕಳ್ಳತನ ಮಾಡುತ್ತಿದ್ದ. ಕಳ್ಳತನ ಮಾಡಿ ೩ ಸಲಪೋಲೀಸ್ ಸ್ಟೇಷನ್‌ಗೆ ಹೋಗಿದ್ದಾನೆ. ಆವಾಗ ಅವನನ್ನು ನಾನೇ ಬಿಡಿಸಿಕೊಂಡು ಬಂದಿದ್ದೇನೆ. ಆ ಮೇಲೆ ನನ್ನ ಎರಡನೇ ಹೆರಿಗೆ ಆಗಿ ೩ನೇ ದಿನಕ್ಕೆ ನನ್ನನ್ನು ಬಿಟ್ಟು ಹೋಗಿಬಿಟ್ಟ ಸಾರ್, ಮೊದಲನೇ ಮಗನನ್ನು ಕರೆದುಕೊಂಡು ಊರು ಬಿಟ್ಟುಬಿಟ್ಟ. ಮನೆಯಲ್ಲಿ ಅತ್ತೆ ಮಾವಂದಿರು ನನ್ನನ್ನು ಬೈಯುತ್ತಾ ಇದ್ದರು. ಹಂಗಾಗಿ ಆ ಕಾಟ ತಾಳೋದಕ್ಕೆ ಆಗದೆ ತವರು ಮನೆಗೆ ಬಂದು ಬಿಟ್ಟೆ ಸಾರ್. ಒಂದು ಸಲ ಗಂಡ ಸ್ಟೇಷನ್‌ಗೆ ಹೋಗಿದ್ದಾಗ ನನ್ನ ಮೈಮೇಲಿನ ಸಾಮಾನುಗಳನ್ನು (ಆಭರಣಗಳನ್ನು) ಒತ್ತೆ ಇಟ್ಟು ಬಿಡಿಸಿಕೊಂಡು ಬಂದಿದ್ದೇನೆ. ಆದರೆ ಅವನು ಮತ್ತೆ ನನ್ನ ಮೇಲೆಯೇ ಕಂಪ್ಲೆಂಟ್ ಕೊಟ್ಟಿದ್ದ ಸಾರ್. ಆದರೆ ಊರಾಗಿನ ಹಿರಿಯರು ಸೇರಿ ಅವನಿಗೆ ಚೆನ್ನಾಗಿ ಮಂಗಳಾರತಿ ಮಾಡಿದ್ರು ಆಗ ಕಂಪ್ಲೆಂಟ್ ವಾಪಸ್ ತಗೊಂಡ. ಈಗ ನನಗೆ ೩ ವರ್ಷದ ಮಗು ಇದೆ. ಇಲ್ಲಿ ನೋಡಿದ್ರೆ ಇವನನ್ನು ನೋಡಿಕೊಳ್ಳೋಕೆ ಯಾರೂ ಇಲ್ಲ. ಅದಕ್ಕಾಗಿ ಕೆಲಸಕ್ಕೆ ಹೋಗುವಾಗ ನನ್ನ ಜೊತೆಗೆ ಕರೆದುಕೊಂಡು ಹೋಗುತ್ತೇನೆ ಸಾರ್. ಆ ನನ್ನ ಮೊದಲನೇ ಮಗ ಹೆಂಗಿದ್ದಾನೋ ಏನೋ. ಅವನನ್ನೂ ಕೂಡ ಕಳ್ಳನನ್ನಾಗಿ ಮಾಡಿಬಿಟ್ರೆ ಅಂತ ತುಂಬಾ ಚಿಂತೆಯಾಗುತ್ತೆ ಸಾರ್. ಏನ್ ಮಾಡೋದು ಸಾರ್ ನನ್ನ ಹಣೆ ಬರಹ ಎಂದು ಹೇಳಿ ಸುಮ್ಮನಾದರು. ದೇವೇಂದ್ರಮ್ಮ ೧೫೦೦೦ರೂ ಸಾಲ ಮಾಡಿಕೊಂಡಿದ್ದಾರೆ. ಸಾಲ ಏಕೆ ಮಾಡಿಕೊಂಡಿದ್ದೀರಿ ಎಂದು ಕೇಳಿದಾಗ ನನಗೆ ಹೆರಿಗೆ ಸಂದರ್ಭದಲ್ಲಿ ಒಂದು ಮಗು ಹೊಟ್ಟೆಯಲ್ಲಿ ತೀರಿಕೊಂಡಿತ್ತು. ಆವಾಗ ನಮ್ಮ ಪರಿಸ್ಥಿತಿ ಹೇಳಲಾಗದು. ಅಂತಹ ಪರಿಸ್ಥಿಯಲ್ಲಿ ಗಂಡನೂ ಜೊತೆಗೆ ಇರಲಿಲ್ಲ. ಹಂಗಾಗಿ ನಮ್ಮ ಅಪ್ಪ ಅಮ್ಮ ನನ್ನ ಜೊತೆಗಿದ್ದು ನನ್ನ ಹೆಸರಿನಲ್ಲಿ ೧೫೦೦೦ರೂ ಸಾಲ ಮಾಡಿ ನನಗೆ ತೋರಿಸಿದರು. ಈಗಲೂ ಆ ಸಾಲವನ್ನು ತೀರಿಸುತ್ತಿದ್ದೇನೆ ಎಂದು ಹೇಳಿದರು.

ಇಲ್ಲಿ ಮುಖ್ಯವಾಗಿ ಗಂಗಾಧರ ತನ್ನ ಹೆಂಡತಿಯನ್ನು ಹಿಂಸಿಸಿದ ರೀತಿಯನ್ನು ನೋಡಿದರೆ ದೇವೇಂದ್ರಮ್ಮ ತುಂಬಾ ನೊಂದಿರುವುದು ಕಂಡುಬರುತ್ತದೆ. ಕಳ್ಳತನ ಹುದ್ದೆಯನ್ನು ಮಾಡಿ ಜೀವನ ನಡೆಸುವ ಈ ಗಂಗಾಧರ ಮಗುವನ್ನು ತಾಯಿಯಿಂದ ದೂರ ಮಾಡಿ ದೇವೇಂದ್ರಮ್ಮನಿಗೆ ಮಾನಸಿಕವಾಗಿ ತುಂಬಾ ಹಿಂಸೆಯನ್ನು ನೀಡಿರುವುದು ಕಂಡುಬರುತ್ತದೆ. ಹಾಗೆಯೇ ದೇವೇಂದ್ರಮ್ಮ ತವರು ಮನೆಯಲ್ಲಿಯೇ ಇದ್ದು ಕೂಲಿ ಕೆಲಸ ಮಾಡಿ ಜೀವನ ಸಾಗಿಸುತ್ತಿದ್ದಾಳೆ. ಹೀಗೆ ಗಂಡನಿಂದ ಬಹಳ ನೊಂದಿರುವುದು ಕಂಡುಬರುತ್ತದೆ.

ಪ್ರಕರಣ ೪.

ಒಡ್ಡರು ಜಾತಿಗೆ ಸೇರಿದ ಮಾರೆಮ್ಮ ಕಮಲಾಪುರ ಪಟ್ಟಣದ ಕುಪ್ಪಯ್ಯ ಕ್ಯಾಂಪ್‌ನಲ್ಲಿ ವಾಸವಾಗಿದ್ದಾರೆ. ಇವರಿಗೆ ಸುಮಾರು ೪೫ವರ್ಷ ವಯಸ್ಸಾಗಿದ್ದು, ಇಬ್ಬರು ಮಕ್ಕಳಿದ್ದಾರೆ. ಇವರಲ್ಲಿ ಒಂದು ಹೆಣ್ಣು ಮಗು ಮತ್ತು ಒಂದು ಗಂಡು. ಹೆಣ್ಣು ಮಗಳು ೭ನೇ ತರಗತಿ ಓದಿ ಶಾಲೆಯನ್ನು ಬಿಟ್ಟು ಬೇಲ್ದಾರ್ ಕೆಲಸಕ್ಕೆ ಹೋಗುತ್ತಿದ್ದಾಳೆ. ಮಗ ಪಿ.ಯು.ಸಿ. ಓದುತ್ತಿದ್ದಾನೆ. ಮಾರೆಮ್ಮನವರ ಗಂಡನ ಹೆಸರು ತಿಮ್ಮಪ್ಪ. ಮಾರೆಮ್ಮನವರ ತವರು ಮನೆ ಕುಮಲಾಪುರದ ಕುಪ್ಪಯ್ಯಕ್ಯಾಂಪ್. ಗಂಡನ ಮನೆ ಬಳ್ಳಾರಿ. ಈಗ ಇವರ ವಾಸ ತವರುಮನೆಯಲ್ಲಿ. ಇವರೂ ಸಹ ಗಂಡನ ಮನೆಯಲ್ಲಿ ಹಲವಾರು ರೀತಿಯಲ್ಲಿ ಹಿಂಸೆಯನ್ನು ಅನುಭವಿಸಿ ಬಂದಿದ್ದಾರೆ. ಅವರ ಮಾತಿನಲ್ಲೇ ಕೇಳುವುದಾದರೆ. "ಸಾರ್ ನನ್ನ ಗಂಡನ ಮನೆ ಬಳ್ಳಾರಿ. ನನ್ನ ಗಂಡ ತುಂಬಾ ಕುಡಿಯುತ್ತಿದ್ದ. ಅವನು ಬೇಲ್ದಾರ್ ಕೆಲಸಕ್ಕೆ ಹೋಗುತ್ತಿದ್ದ. ಮನೆಯಲ್ಲಿ ಅತ್ತೆ ಮಾವಂದಿರೂ ಸಹ ಕುಡಿಯುತ್ತಾರೆ. ಆ ಮನೆಯಲ್ಲಿ ಎಲ್ಲರೂ ಕುಡುಕರು. ಗಂಡ ದಿನಾಲೂ ಕುಡಿದು ಬಂದು ಬೈಯ್ಯುವುದು, ಹೊಡೆಯುವುದು ಮಾಡುತ್ತಿದ್ದ. ಅತ್ತೆ ಮಾವನವರೂ ಕೂಡ ನನ್ನನ್ನು ಹೊಡೆಯೋಕೆ ಹೇಳಿಕೊಡುತ್ತಿದ್ದರು. ಕೆಲವು ಸಲ ಅವರೂ ನನ್ನನ್ನೂ ಹೊಡೆದಿದ್ದಾರೆ. ಗಂಡ ದಿನಾಲೂ ೨೦೦ ರಿಂದ ೨೫೦ರೂಪಾಯಿ ದುಡಿಯುತ್ತಿದ್ದ. ಆದರೆ ಅದನ್ನು ಬರೀ ಕುಡಿಯೋದಕ್ಕೆ ಖರ್ಚು ಮಾಡುತ್ತಿದ್ದ. ಮನೆಗೆ ಏನೂ ಕೊಡುತ್ತಿರಲಿಲ್ಲ. ಮನಿ ಸಂಸಾರ ನಡೆಸಬೇಕೆಂದರೆ ನಾನು ದುಡಿಯೋಕೆ ಹೋಗಬೇಕಿತ್ತು. ಹಂಗಾಗಿ ಹಣ್ಣು ಮಾರೋದಕ್ಕೆ ಹೋಗುತ್ತಿದ್ದೆ. ಅದರಿಂದ ಬಂದ ದುಡ್ಡಿನಿಂದ ಸಂಸಾರ ನಡೆಸುತ್ತಿದ್ದೆ ಸಾರ್. ಅವನಿಗೆ ಇನ್ನೊಂದು ಕೆಟ್ಟ ಚಟ ಇತ್ತು ಸಾರ್, ಅದೇ ಸೂಳೆಯರನ್ನು ಮಾಡೋದು. ದುಡಿದಿದ್ದನ್ನೆಲ್ಲಾ ಕುಡಿಯೋದಕ್ಕೆ, ಸೂಳೆಯರಿಗೇ ಖರ್ಚು ಮಾಡುತ್ತಿದ್ದ. ನನಗೂ ಸಾಕಾಗಿ ಹೋಯ್ತು ಸಾರ್ ಒಂದು ದಿನ ಜಗಳ ಮಾಡಿಕೊಂಡು ನನ್ನ ಮಕ್ಕಳನ್ನು ಕರೆದುಕೊಂಡು ತವರು ಮನೆಗೆ ಬಂದು ಬಿಟ್ಟೆ ಸಾರ್. ಆದರೆ ಅವನು ಮತ್ತೆ ಇಲ್ಲಿಗೇ ಬಂದು ಜಗಳಮಾಡಿಕೊಂಡು ನನ್ನ ಮಗನನ್ನು ಕರೆದುಕೊಂಡು ಹೋಗಿಬಿಟ್ಟ ಈಗ್ಗೆ ೫ವರ್ಷ ಆಯ್ತು ಸಾರ್ ಮನೆಬಿಟ್ಟು ಬಂದು ಒಂದು ಸಲಾನೂ ತಿರುಗಿ ನೋಡಿಲ್ಲ, ಅವನೂ ಬರೋಲ್ಲ ನಾನೂ ಹೋಗಲ್ಲ. ಆದರೆ ಮಗ ಆವಾಗಾವಾಗ ಬಂದು ಹೋಗ್ತಾನೆ. ಇಲ್ಲಿ ನೋಡಿದ್ರೆ ಅಪ್ಪ, ಅಮ್ಮ, ತಮ್ಮ, ತಮ್ಮನ ಹೆಂಡತಿ ಇದ್ದಾರೆ. ಇಲ್ಲಿ ಎಷ್ಟು ದಿನ ಅಂತ ಇರೋದು ಸಾರ್. ಗಂಡ ಬಿಟ್ಟು ಬಂದೋಳು ಅಂತ ಹೇಳಿ ಆವಾಗಾವಾಗ ಮಾತಿಗೆ ಮಾತು ಬಂದಾಗ ಹೇಳುತ್ತಿರುತ್ತಾರೆ. ಅದರಿಂದ ಸತ್ತು ಹೋಗಬೇಕು ಅನ್ಸುತ್ತೆ ಸಾರ್. ಇಲ್ಲಿ ಸುಮ್ಮನೆ ಕೂತ್ಕೊಂಡು ತಿನ್ನೋಕೆ ಆಗೋದಿಲ್ಲ ಅಲ್ಲಾ ಸಾರ್ ಅದಕ್ಕೆ ಮಗಳನ್ನು ಬೇಲ್ದಾರ್ ಕೆಲಸಕ್ಕೆ ಕಳಿಸ್ತಿದೀನಿ. ನಾನೂ ಕೂಲಿ ಕೆಲಸಕ್ಕೆ ಹೋಗುತ್ತೀನಿ ಎಂದರು. ಪಕ್ಕದಲ್ಲಿಯೇ ಇದ್ದ ಮಗಳಾದ ಗಾಳೆಮ್ಮನನ್ನು ಮಾತನಾಡಿಸಿದಾಗ ಅವರು ಈ ರೀತಿ ಹೇಳಿದರು. ಸಾರ್ ನಾನು ೭ನೇ ತರಗತಿ ಓದಿ ಬಿಟ್ಟುಬಿಟ್ಟೆ. ಇದಕ್ಕೆ ನಮ್ಮ ಅಪ್ಪನೇ ಕಾರಣ. ನನ್ನನ್ನು ಸರಿಯಾಗಿ ನೋಡಿಕೊಳ್ಳುತ್ತಿರಲಿಲ್ಲ. ನನ್ನ ಅಣ್ಣನನ್ನು ಮಾತ್ರ ಚೆನ್ನಾಗಿ ನೋಡಿಕೊಳ್ಳುತ್ತಿದ್ದ. ದಿನಾಲು ಕುಡಿದು ಬಂದು ಅಮ್ಮನನ್ನು ಹೊಡೆಯುತ್ತಿದ್ದ. ಅದರಿಂದ ನನಗೆ ತುಂಬಾ ನೋವಾಗುತ್ತಿತ್ತು. ಮತ್ತೆ ನನಗೆ

ಚೆನ್ನಾಗಿ ಓದಬೇಕು ಅಂತ ಅನಿಸಿತ್ತು. ಆದರೆ ಅಪ್ಪ ಓದೋದನ್ನು ಬಿಡಿಸಿಬಿಟ್ಟ. ಹಂಗಾಗಿ ನಾನೂ ಓದೋದು ಬಿಟ್ಟು ಕೆಲಸಕ್ಕೆ ಸೇರಿಕೊಂಡುಬಿಟ್ಟೆ ಸಾರ್ ಎಂದು ಹೇಳಿದರು. ಇಲ್ಲಿ ಮುಖ್ಯವಾಗಿ ಗಂಡನಿಂದ ಮಾರೆಮ್ಮ ಮತ್ತು ಮಗಳು ಗಾಳೆಮ್ಮ ಇಬ್ಬರೂ ಸಹ ಹಿಂಸೆಯನ್ನು ಅನುಭವಿಸಿರುವುದು ಕಂಡುಬರುತ್ತದೆ.

**ಪ್ರಕರಣ ೫.**

ಕಮಲಾಪುರದ ೧೪ನೇ ವಾರ್ಡಿನವರಾದ ಈರಮ್ಮ, ಮಾರೆಕ್ಕ ಎಂಬುವವರು ನಾಯಕ ಜನಾಂಗಕ್ಕೆ ಸೇರಿದವರು. ಇವರ ಕುಟುಂಬದಲ್ಲಿ ಸುಮಾರು ೧೨ ಜನ ಸದಸ್ಯರಿದ್ದಾರೆ. ಈ ಕುಟುಂಬದ ಜವಾಬ್ದಾರಿಗಳೆಲ್ಲವೂ ಅತ್ತೆಯಾದ ಅಕ್ಕಮ್ಮನದು. ಅತ್ತೆಯಿಂದ ಸೊಸೆಯಂದಿರು ತುಂಬಾ ಹಿಂಸೆಯನ್ನು ಅನುಭವಿಸುತ್ತಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದುಬಂದಿತು. ಅಕ್ಕಮ್ಮನಿಗೆ ಇಬ್ಬರು ಸೊಸೆಯಂದಿರು. ಮೊದಲನೆಯವರು ಈರಮ್ಮ. ಇವರಿಗೆ ಒಂದು ಗಂಡು ಎರಡು ಹೆಣ್ಣು ಮಕ್ಕಳಿವೆ. ನಂತರ ಮಾರೆಕ್ಕ ಎಂಬುವವರು ಎರಡನೆಯವರು. ಇವರಿಗೆ ಎರಡು ಗಂಡು ಮಕ್ಕಳಿವೆ. ಈರಮ್ಮ ಮತ್ತು ಮಾರೆಕ್ಕ ಕುಟುಂಬದಲ್ಲಿ ಬಹಳಷ್ಟು ಹಿಂಸೆಯನ್ನು ಅನುಭವಿಸುತ್ತಿರುವುದನ್ನು ಅವರ ಮಾತಿನಿಂದಲೇ ಕೇಳಬಹುದಾಗಿದೆ.

ಈರಮ್ಮ ತನ್ನ ನೋವನ್ನು ತೋಡಿಕೊಳ್ಳುತ್ತಾ, ಸಾರ್, ಮನೆಯ ಯಜಮಾನಿಕೆ ಎಲ್ಲಾ ನಮ್ಮ ಅತ್ತೆಯದೆ. ಅವಳು ಹೇಳಿದಂಗ ಕೇಳಿಕೊಂಡು ಹೋಗಬೇಕು ಇಲ್ಲಾಂದ್ರೆ ಗಂಡನಿಗೆ ಚಾಡಿ ಹೇಳಿ ನಮಗೆ ಹೊಡೆಸುತ್ತಾಳೆ. ಮನೆಯಲ್ಲಿ ನಮಗೆ ಪುರುಸೊತ್ತೇ ಇಲ್ಲ ಸಾರ್, ಸುಮ್ಮನೆ ಖಾಲಿ ಕುಂದ್ರಂಗಿಲ್ಲ. ಏನಾದರೂ ಒಂದು ಕೆಲಸ ಮಾಡ್ತಾ ಇರಬೇಕು. ಸ್ವಲ್ಪ ಹೊತ್ತು ಸುಮ್ಮನೆ ಕುಂತರೆ ಹೊಟ್ಟೆಯಲ್ಲಿ ಬೆಂಕಿ ಹಾಕಿದಂಗೆ ಆಡ್ತಾಳೆ ಸಾರ್ ನಮ್ಮ ಅತ್ತೆ. ಇದಕ್ಕೆ ಪೂರಕವಾಗಿ ನಡುವೆ ಬಾಯಿ ಹಾಕಿದ ಮಾರೆಕ್ಕ ಅತ್ತೆ ತುಂಬಾ ಕಾಟ ಕೊಡುತ್ತಾಳೆ ಸಾರ್, ಅವಳು ಈವತ್ತು, ನಾಳೆ ಸಾಯೋಹಂಗೆ ಇದ್ದಾಳೆ ಅದ್ರೂ ನಮಗೆ ಕಾಟ ಕೊಡೋದನ್ನ ಬಿಡುತ್ತಿಲ್ಲ. ಮತ್ತೆ ನಾವು ದಿನಾಲೂ ಸ್ನಾನ ಮಾಡೋ ಹಾಗಿಲ್ಲ. ವಾರಕ್ಕೆ ಒಂದು ದಿನ ಸ್ನಾನ ಮಾಡುತ್ತೇವೆ ಸಾರ್, ಆಮೇಲೆ ತಲೆಗೆ ಕೊಬ್ಬರಿ ಎಣ್ಣೆನೂ ಜಾಸ್ತಿ ಹಚ್ಕೊಬಾರದು ಮತ್ತೆ ಪಕ್ಕದ ಮನೆಯವರೊಂದಿಗೆ ಮಾತನಾಡಬಾರದು, ಹಬ್ಬ ಹರಿದಿನಗಳಲ್ಲೂ ಸರಿಯಾಗಿ ಮಾತಾಡೋಹಾಗಿಲ್ಲ. ಪಕ್ಕದ ಮನೆಯವರು ಕೂಡ ನಮ್ಮ ಮನೆಗೆ ಬರೋಹಾಗಿಲ್ಲ. ಒಳ್ಳೆಯ ಬಟ್ಟೆಗಳನ್ನು ಹಾಕಿಕೊಳ್ಳೋಹಾಗಿಲ್ಲ. ಏನಾದರೂ ಕೇಳಿದರೆ ಗದರಿಸಿಬಿಡುತ್ತಾಳೆ. ಮತ್ತೆ ನಮ್ಮ ಗಂಡನೂ ಅಷ್ಟೇ ಅಮ್ಮನ ಮಾತು ತೆಗೆದುಹಾಕೋದಿಲ್ಲ. ಮತ್ತೆ ದಿನಾಲು ೪ ಗಂಟೆಗೆ ಏಳಬೇಕು ಎದ್ದು ಅಡುಗೆ, ಮನೆಕೆಲಸ ಮಾಡಬೇಕು ಸಾರ್. ಆ ಮೇಲೆ ೬ ಗಂಟೆಗೆಲ್ಲ ಕೆಲಸಕ್ಕೆ ಹೋಗಬೇಕು. ಮತ್ತೆ ಮೂರು ಗಂಟೆಗೆ ಬರ್ತೀವಿ ಸಾರ್, ಬಂದಮೇಲೂ ನಮಗೆ ರೆಸ್ಟ್ ಅನ್ನೋದೆ ಇಲ್ಲ. ಮತ್ತೆ ಮನೆಗೆಲಸ ಮಾಡಬೇಕು, ರಾತ್ರಿ ೧೦ಗಂಟೆತನ ಬರೀ ಕೆಲಸ ಕೆಲಸ ಅಂತಾನೆ ಇರ್ತೀವಿ, ಮದುವೆಯಾಗಿ, ಮಕ್ಕಳಾಗಿ ಇಷ್ಟು ವರ್ಷವಾದರೂ ಒಂದು ದಿನನೂ ನಕ್ಕೊಂತ ಮಾತಾಡಿಲ್ಲ ಸಾರ್, ಗಂಡ ಸಾಕಷ್ಟು ಸಲ ಹೊಡೆದಿದ್ದಾನೆ ಅದನ್ನೆಲ್ಲಾ ಸುಧಾರಿಸಿಕೊಂಡು

ಹೋಗಬೇಕು ಸಾರ್. ಏನ್ ಮಾಡೋದು ನಮ್ ಹಣೇಬರಹ. ಮತ್ತೆ ಈರಮ್ಮ ಮದ್ಯದಲ್ಲ ಮಾತನಾಡುತ್ತಾ ನಾವು ದುಡಿದದ್ದನ್ನೆಲ್ಲಾ ತಂದು ಅತ್ತಿ ಕೈಗೆ ಕೊಡಬೇಕು ಇಲ್ಲ ಅಂದ್ರೆ ಕೆಟ್ಟ ಕೆಟ್ಟದಾಗಿ ಬೈಯುತ್ತಾಳೆ ಮತ್ತೆ ಮಗನಿಗೆ ಚಾಡಿ ಹೇಳಿ ಹೊಡೆಸ್ತಾಳೆ. ಇಲ್ಲಿ ನಡೆಯೋದನ್ನೆಲ್ಲಾ ತವರು ಮನೆಯಲ್ಲಿ ಹೇಳಿದರೆ ಅವರೂ ಕೂಡ ಸುಧಾರಿಸಿಕೊಂಡು ಹೋಗಬೇಕು, ನೀನೇ ತಗ್ಗಿ ಬಗ್ಗಿ ನಡಿಬೇಕು ಅಂತ ನನಗೇ ಬುದ್ದಿಮಾತು ಹೇಳ್ತಾರೆ. ಆದರೆ ಇಲ್ಲಿನ ಕಷ್ಟ ಅವರಿಗೇನು ಗೊತ್ತು ಸಾರ್. ಈ ಮನೆ ಒಂದು ಜೈಲು ಇದ್ದಂಗ ಸಾರ್ ಎಂದು ಹೇಳುತ್ತಾ ತಮ್ಮ ರೋಧನವನ್ನು ತೋಡಿಕೊಂಡರು.

ಪ್ರಕರಣ ೬.



ಜಯಲಕ್ಷ್ಮೀ, ಇವರು ಕಮಲಾಪುರ ಪಟ್ಟಣದ ೧ನೇ ವಾರ್ಡ್ ಆದ ಪಟ್ಟಾಭಿರಾಮ ಕ್ಯಾಂಪ್‌ನಲ್ಲಿ ವಾಸವಾಗಿದ್ದಾರೆ. ಇವರಿಗೆ ೧೯ವರ್ಷ ವಯಸ್ಸು. ೩ ಮಕ್ಕಳಿದ್ದಾರೆ. ಒಂದು ಹೆಣ್ಣು ಮಗು ಳನೇ ತರಗತಿ ಓದುತ್ತಿದ್ದಾರೆ. ಇನ್ನು ಇಬ್ಬರು ಚಿಕ್ಕವರಿದ್ದಾರೆ. ಇವರು ಬಡಿಗೇರು ಜಾತಿಗೆ ಸೇರಿದವರಾಗಿದ್ದಾರೆ. ಜಯಲಕ್ಷ್ಮೀ ಚಿಕ್ಕವಳಿದ್ದಾಗಲೇ ಮದುವೆ ಮಾಡಿಕೊಡಲಾಗಿದೆ. ಗಂಡನ ಹೆಸರು ಸಣ್ಣಸ್ವಾಮಿ. ಇವನು ತುಂಬಾ ಕುಡುಕನಾಗಿದ್ದು ದಿನಾಲೂ ಕುಡಿದು ಬಂದು ಹಿಂಸೆಯನ್ನು ನೀಡುತ್ತಿದ್ದಾನೆ. ಇವರು ಬಾಡಿಗೆ ಮನೆಯಲ್ಲಿ ವಾಸವಾಗಿದ್ದು ಆ ಮನೆಗೆ ಬಾಗಿಲುಗಳೇ ಇಲ್ಲ. ಇವರಿಗೆ ಒಂದು ಶಾಶ್ವತವಾದ ಮನೆಯಿಲ್ಲ. ಇವರು ಅನುಭವಿಸುತ್ತಿರುವ ನೋವನ್ನು ಅವರ ಬಾಯಿಯಿಂದಲೇ ಕೇಳಬೇಕು. ನನ್ನ ತವರುಮನೆ ವ್ಯಾಸನಕೆರೆ ಸಾರ್ ನಾನು ೩ನೇ ತರಗತಿ ಓದುತ್ತಿದ್ದಾಗಲೇ ಮದುವೆಮಾಡಿ ಕೊಟ್ಟರು. ಗಂಡನ ಮನೆ ಕಮಲಾಪುರ ಗಂಡ ಬಡಿಗತನವನ್ನು ಮಾಡುತ್ತಿದ್ದ. ಅದರಿಂದ ಬಂದ ಕೂಲಿಯಿಂದ ಜೀವನ ನಡೆಸುತ್ತಿದ್ದೆವು. ನಾನೂ ಕೂಡ ಕೂಲಿ ಕೆಲಸಕ್ಕೆ ಹೋಗುತ್ತಿದ್ದೇನೆ. ಮೊದಮೊದಲು ನನ್ನ ಗಂಡ ಕುಡಿಯುತ್ತಿರಲಿಲ್ಲ, ಮದುವೆಯಾಗಿ ಒಂದು ಹೆಣ್ಣು ಮಗು ಆದ ಮೇಲೆ ಕುಡಿಯೋಕೆ ಆರಂಭಮಾಡಿದ ಸಾರ್. ಅವನಿಗೆ ಹೆಣ್ಣು ಮಕ್ಕಳು ಅಂದರೆ ಇಷ್ಟ ಇಲ್ಲ, ದಿನಾಲೂ ಕುಡಿದು ಬಂದು ಹೊಡೆಯೋದು, ಬೈಯೋದು ಮಾಡ್ತಾ ಇದ್ದಾನೆ ಸಾರ್. ಯಾವಾಗ ಬೇಕಂದ್ರೆ ಆವಾಗ ಕುಡಿಯೋದು, ಬರೋದು ಹೊಡೆಯೋದು ಮಾಡ್ತಾನೆ, ಅವನಿಗೆ ಏನೂ ಕೇಳೋಹಂಗೆ ಇಲ್ಲ ಸಾರ್. ಏನಾದ್ರೂ ಕೇಳಿದ್ರೆ ಆವತ್ತು ನನ್ನ ಕಥೆ ಮುಗಿತು ಅಂತ ಅನ್ಕೋಬೇಕು. ಮೊದಲು ಕಮಲಾಪುರದಲ್ಲಿದ್ದಿವಿ. ಅಲ್ಲಿ ದಿನಾಲೂ ಕುಡಿದು ಬಂದು ಪಕ್ಕದ ಮನೆಯವರಿಗೆ, ದಾರಿಯಲ್ಲಿ ಹೋಗುವವರಿಗೆ ಸುಮ್ಮಸುಮ್ಮನೆ ಬೈಯುತ್ತಿದ್ದ ಸಾರ್ ಮತ್ತೆ ನಾನೇ ಅವನನ್ನು ಮನೆಗೆ ಎಳೆದುಕೊಂಡು ಬರ್ತಾ ಇದ್ದೆ. ಒಂದು ದಿನ ಮನೆ ಯಜಮಾನ ಮನೆ ಖಾಲಿ ಮಾಡೋದಕ್ಕೆ ಹೇಳಿದ ಸಾರ್. ಆಮೇಲೆ ನಾವು ಈ ಮನೆಗೆ ಬಂದ್ವಿ. ಈಗಲೂ ಅವನು ದುಡಿಯೋದು ಏನೂ ಇಲ್ಲ ಆದ್ರೆ ಕುಡಿಯೋದು ಮಾತ್ರ ಮರೆಯಲ್ಲ ಸಾರ್, ಅವನಿಗೆ ಕುಡಿಯೋದಿಕ್ಕೆ ದುಡ್ಡು ಎಲ್ಲಿಂದ ಬರುತ್ತೋ ಆ ದೇವರಿಗೆ ಗೊತ್ತು. ಮನೇಲಿ ನೋಡಿದ್ರೆ ವಯಸ್ಸಾದ ಅತ್ತೆ ಇದ್ದಾಳೆ. ಎಷ್ಟೋ ಸಾರಿ ಕುಡಿದು ಬಂದು ಅತ್ತೆಗೂ ಹೊಡೆದಿದ್ದಾನೆ. ಮಕ್ಕಳ ಬಗ್ಗೆ ಸ್ವಲ್ಪನೂ ಯೋಚನೆ ಇಲ್ಲ ಸಾರ್ ಅವನಿಗೆ, ಕೆಲವು ಸಾರಿ ಅವನು ಮನೆನೂ ಬಿಟ್ಟು

ಹೋಗಿದ್ದಾನೆ. ಆವಾಗ ಮನಿ ಸಂಸಾರವೆಲ್ಲಾ ನಾನೇ ನೋಡ್ಕೊಂಡು ಹೋಗಿದ್ದೇ ನಾನು ಕೂಲಿ ಕೆಲಸಕ್ಕೆ ಹೋಗುತ್ತೇನೆ ಅದರಿಂದ ಬಂದ ಹಣದಿಂದಲೇ ಮನಿ ಸಂಸಾರ ನಡೆಸ್ತೀನಿ. ಕೆಲವೊಂದು ಸಲ ರಕ್ತ ಬರೋಹಾಗೆ ಹೊಡೆತಾನೆ ಸಾರ್. ನಾನು ಇದನ್ನ ತಾಳಲಾರದೆ ತವರು ಮನೆಗೆ ಹೋದ್ರೆ ಅಲ್ಲಿ ಅಪ್ಪ ಅಮ್ಮನೂ ಸಹ ನನಗೇ ಬುದ್ದಿಮಾತು ಹೇಳ್ತಾರೆ. ಒಂದು ಸಲ ಪಂಚಾಯ್ತಿ ಮಾಡಿದ್ರು ಪಂಚಾಯ್ತಿಯಲ್ಲಿ ನನ್ನ ಗಂಡ ಕುಡಿಯೋದಿಲ್ಲ, ಹೊಡೆಯೋದಿಲ್ಲ, ಚೆನ್ನಾಗಿ ನೋಡಿಕೊಂಡು ಹೋಗ್ತೀನಿ ಅಂತ ಹೇಳಿದ್ದ. ಆದರೆ ಇಲ್ಲಿಗೆ ಬಂದ ಕೂಡಲೇ "ಊರಿಗೆ ಹೋಗಿ ಪಂಚಾಯ್ತಿ ಸೇರಿಸ್ತಿಯಾ" ಅಂತ ಹೇಳಿ ಮತ್ತೆ ಹೊಡೆದಿದ್ದಾನೆ ಸಾರ್ ಏನ್ ಮಾಡೋದು ಇವನು ಸರಿಹೋಗೋದಿಲ್ಲ, ಇಂತಹ ಗಂಡ ಇದ್ದರೂ ಒಂದೇ ಸತ್ತರೂ ಒಂದೆ.

ಕೌಟುಂಬಿಕ ಹಿಂಸೆ ತಡೆಕಾಯಿದೆಯ ಬಗ್ಗೆ ನಿಮಗೆ ತಿಳಿದಿದೆಯಾ? ಪೋಲೀಸ್ ಕಂಪ್ಲೆಂಟ್ ಏನಾದರೂ ಕೊಟ್ಟಿದಿರಾ ಎಂದು ಪ್ರಶ್ನಿಸಿದಾಗ. ಇಲ್ಲ ಸಾರ್ ಮನೆಯ ಸಂಸಾರ ನಡೆಸಿಕೊಂಡು ಹೋಗೋದೆ ಕಷ್ಟ ಅಂತದರಲ್ಲಿ ಕಾನೂನುಗಳ ಬಗ್ಗೆ ತಿಳಿಕಂಡು ಏನ್ ಮಾಡೋದು. ಪೋಲೀಸ್ ಕಂಪ್ಲೆಂಟ್ ಏನಾದರೂ ಕೊಟ್ರೆ ಮತ್ತೆ ಅದರಿಂದ ನೋವನ್ನು ಅನುಭವಿಸೋದು ನಾನೇ ಸಾರ್ ಅದಕ್ಕೆ ಯಾರಿಗೂ ಏನೂ ಹೇಳೋದಿಲ್ಲ ನನ್ನ ಹಣೇಬರದಲ್ಲಿ ಇದ್ದಂಗ ಆಗಲಿ ಎಂದು ಹೇಳಿ ಸುಮ್ಮನಾಗಿಬಿಟ್ಟಿದ್ದೇನೆ ಎಂದರು.

**ಪ್ರಕರಣ ೭.**

ಕಮಲಾಪುರದ ೧೪ನೇ ವಾರ್ಡ್‌ನಲ್ಲಿ ವಾಸವಾಗಿರುವ ಹಸೀನ, ಮುಸ್ಲಿಂ ಜನಾಂಗಕ್ಕೆ ಸೇರಿದವರಾಗಿದ್ದಾರೆ. ಇವರಿಗೆ ಸುಮಾರು ೨೧ವರ್ಷ ವಯಸ್ಸು. ಮತ್ತು ಎರಡು ಹೆಣ್ಣು, ಒಂದು ಗಂಡು ಸೇರಿ ೩ ಜನ ಮಕ್ಕಳು. ಇವರ ತವರು ಮನೆ ಕಮಲಾಪುರ, ಗಂಡನ ಮನೆ ಕಾರಿಗನೂರು. ಗಂಡನ ಹೆಸರು ಮಹಮ್ಮದ್. ಹಸೀನ ಅವರು ತಮ್ಮ ೯ನೇ ವರ್ಷದಲ್ಲಿ ವಿವಾಹವಾಗಿದ್ದಾರೆ. ಇವರು ತಮ್ಮ ಗಂಡನಿಂದ ಚಿತ್ರಹಿಂಸೆಯನ್ನು ಅನುಭವಿಸಿ ಗಂಡನ ಮನೆ ಬಿಟ್ಟು ತವರು ಮನೆಗೆ ಬಂದು ಇದ್ದಾರೆ. ಹಸೀನ ಹೇಳುವ ಹಾಗೆ "ಸಾರ್ ನನಗೆ ೯ನೇ ವರ್ಷದಲ್ಲೇ ಮದುವೆ ಮಾಡಿಕೊಟ್ಟಿದ್ದಾರೆ. ಗಂಡ ತುಂಬಾ ಕುಡುಕ. ಅವನು ಕುಡಿದುಬಂದು ಬಹಳ ಕಷ್ಟ ಕೊಡುತ್ತಿದ್ದ ಸಾರ್ ಮತ್ತೆ ಮನೆಯಲ್ಲಿ ಅತ್ತೆ, ಮಾವನವರೂ ಸಹ ದಿನಾಲೂ ಬೈಯೋದು, ಹೊಡೆಯೋದು ಮಾಡ್ತಾ ಇರ್ತಾರೆ ಸಾರ್, ಒಂದು ದಿನ ನನ್ನನ್ನು ಬಹಳ ಹೊಡೆದಿದ್ದರು. ಆಗ ನಾನು ತವರು ಮನೆಗೆ ಬಂದುಬಿಟ್ಟೆ. ಇಲ್ಲಿಯೇ ೩ ತಿಂಗಳುಗಳ ಕಾಲ ಇದ್ದೆ. ಮತ್ತೆ ಅವರೇ ಬಂದರು ಕರೆದುಕೊಂಡು ಹೋಗಲು. ಆದರೆ ನಾನು ಹೋಗೋದಿಲ್ಲ ಅಂದೆ. ಆವಾಗ ಪಂಚಾಯ್ತಿ ಮಾಡಿದರು. ಆಗ ಬೇರೆ ಮನೆ ಮಾಡ್ತೀನಿ ಅಂದ್ರೆ ಮತ್ತೆ ಕುಡಿಯೋದನ್ನು ಬಿಡ್ತೀನಿ ಅಂದ್ರೆ ಬರ್ತೀನಿ ಅಂದೆ. ಆದ ಅದಕ್ಕೆ ಒಪ್ಪಿದರು. ಆದ್ರೆ ಬೇರೆ ಮನೆ ಮಾಡಿದ್ರೂ ಅಲ್ಲಿಯೂ ಕೂಡ ಹೊಡೆಯೋದನ್ನು ನಿಲ್ಲಿಸಲಿಲ್ಲ. ನನಗೆ ಹೆರಿಗೆ ಆಗಿ ೧೬, ೧೭ನೇ ದಿನಕ್ಕೆ ಹೊಡೆದಿದ್ದಾನೆ ಸಾರ್. ಮನೆಯಲ್ಲಿ ಇರುವ ಟಿ.ವಿ., ಬಟ್ಟೆಗಳನ್ನೆಲ್ಲಾ ಹಾಳು ಮಾಡಿದ್ದಾನೆ. ಸಾರ್, ಹೆಣ್ಣು ಮಕ್ಕಳು ಅಂದ್ರೆ ಅವನಿಗೆ ಆಗೋದಿಲ್ಲ. ಅದಕ್ಕೆ ದಿನಾಲೂ ಕುಡಿದು

ಬರೋದು ಹೊಡೆಯೋದು ಮಾಡ್ತಾನೆ. ಈಗ ಮತ್ತೆ ಅವನ ಜಗಳ ಆಡಿಕೊಂಡು ಬಂದಿದ್ದೀನಿ. ಈ ಸಾರಿ ಹೋಗೋದಿಲ್ಲ ಸಾರ್ ಆ ನರಕಕ್ಕೆ. ಇಲ್ಲಿ ನಮ್ಮ ಅಮ್ಮ ಚೆನ್ನಾಗಿ ನೋಡಿಕೊಳ್ಳುತ್ತಾರೆ. ಅದಕ್ಕೆ ಮಕ್ಕಳನ್ನೂ ಸಹ ಜೊತೆಗೆ ಕರೆದುಕೊಂಡು ಬಂದಿದ್ದೀವಿ. ಅಲ್ಲಿ ಅವನೊಬ್ಬನೇ ಇದ್ದು ಸಾಯಲಿ ಅಂತ ಹೇಳಿ ಬಿಟ್ಟು ಬಂದಿದ್ದೀನಿ ಎಂದು ತಮ್ಮ ನೋವನ್ನು ತೋಡಿಕೊಂಡರು.

**ಪ್ರಕರಣ ೮.**

ಕಮಲಾಪುರದ ನಿವಾಸಿಯಾದ ತಿಪ್ಪಮ್ಮ, ಭಜಂತ್ರಿ ಜಾತಿಗೆ ಸೇರಿವರಾಗಿದ್ದಾರೆ. ಇವರಿಗೆ ಸುಮಾರು ೨೧ವರ್ಷ ವಯಸ್ಸು. ಇವರು ೫ನೇ ತರಗತಿ ಓದಿದ್ದಾರೆ. ಇವರಿಗೆ ಇಬ್ಬರು ಮಕ್ಕಳಿದ್ದಾರೆ. ಇವರಲ್ಲಿ ಒಂದು ಹೆಣ್ಣು ಮತ್ತು ಒಂದು ಗಂಡು. ಗಂಡನ ಹೆಸರು ಭೀಮ. ಈತ ಹಂದಿ ಹಿಡಿಯುವುದು, ಹಂದಿ ಕೊಯ್ಯುವ ಕೆಲಸ ಮಾಡ್ತಾನೆ. ಮನೆಯಲ್ಲಿನ ಜವಾಬ್ದಾರಿಯಲ್ಲ ಮೈದುನ ನೋಡಿಕೊಳ್ಳುತ್ತಾನೆ. ತಿಪ್ಪಮ್ಮ ಅವರು ತಮ್ಮ ಕುಟುಂಬದಲ್ಲಿನ ಅತ್ತೆ, ಮೈದುನ, ನಾದಿನಿ, ಗಂಡ ಇವರುಗಳಿಂದ ತುಂಬಾ ಹಿಂಸೆಯನ್ನು ಅನುಭವಿಸುತ್ತಿದ್ದಾರೆ. ಅವರ ಮಾತಿನಲ್ಲೇ ಹೇಳುವುದಾದರೆ "ನನ್ನ ಗಂಡ ತುಂಬಾ ಕುಡಿಯುತ್ತಾನೆ ಸಾರ್, ಕುಡಿದು ಬಂದು ದಿನಾಲೂ ಹೊಡೆಯುತ್ತಾನೆ. ಮತ್ತೆ ನಮ್ಮ ಅತ್ತೆನೂ ಕೂಡ ಕುಡಿತಾರೆ ಅವರೂ ಸಹ ನನ್ನನ್ನು ಹೊಡೆಯುತ್ತಾರೆ. ಗಂಡನಿಗೆ ಹೆಣ್ಣು ಮಕ್ಕಳೆಂದರೆ ಇಷ್ಟ ಇಲ್ಲ. ಹಂಗಾಗಿ ನನಗೆ ಹೆಣ್ಣು ಮಗು ಆದಾಗ ತುಂಬಾ ಕಷ್ಟ ಅನುಭವಿಸಿದ್ದೇನೆ. ಅದನ್ನು ಯಾರಿಗೂ ಹೇಳೋಹಾಗಿಲ್ಲ. ಮತ್ತೆ ಒಂದು ಗಂಡು ಮಗು ಆಯ್ತು ಆವಾಗ ನನಗೆ ಕೊಡುವ ಕಷ್ಟಗಳು ಸ್ವಲ್ಪ ಕಡಿಮೆ ಆದವು. ಆದರೆ ವರದಕ್ಷಿಣೆ ಜಾಸ್ತಿ ಕೊಡಲಿಲ್ಲ ಅಂತ ಹೇಳಿ ದಿನಾಲೂ ಹೊಡೆಯುತ್ತಾರೆ. ಮತ್ತೆ ನಾನು ಹಣ್ಣಿನ ವ್ಯಾಪಾರ ಮಾಡುತ್ತೇನೆ. ಅದರಿಂದ ಬಂದ ಹಣವನ್ನು ಮೈದುನನಿಗೆ ಕೊಡಬೇಕು. ಇಲ್ಲ ಅಂದರೆ ಅವನೂ ಬೈಯುತ್ತಾನೆ. ನನ್ನ ಗಂಡ ೨೪ಗಂಟೆನೂ ಕುಡಿಯುತ್ತಾನೆ. ಕುಡಿದು ಬಂದಾಗ ಅವನಿಗೆ ಏನೂ ಕೇಳಬಾರದು, ಒಂದು ವೇಳೆ ಏನಾದರೂ ಕೇಳಿದರೆ ಕೈಗೆ ಏನು ಸಿಗುತ್ತೋ ಅದನ್ನು ತಗೊಂಡು ಹೊಡೆಯುತ್ತಾನೆ. ಅವನು ಯಾವಾಗ ಮನೆಗೆ ಬರ್ತಾನೋ, ಯಾವಾಗ ಇಲ್ಲೋ ಒಂದೂ ಗೊತ್ತಾಗಲ್ಲ ಸಾರ್, ನನ್ನನ್ನು ಕಟ್ಟಿಗೆಯಿಂದ ಹೊಡೆದಿದ್ದಾನೆ, ಬೆಲ್ಟ್‌ನಿಂದ ಹೊಡೆದಿದ್ದಾನೆ. ಮತ್ತೆ ಗುದ್ದೋದು, ತಳ್ಳೋದು, ತಿವಿಯುವುದು ಹಿಂಗೆ ನಾನಾ ವಿಧವಾದ ಹಿಂಸೆಗಳನ್ನು ನೀಡುತ್ತಾನೆ. ಅವನು ಹೊಡೆಯುತ್ತಿರುವಾಗ ಅತ್ತೆ, ಮಾವ, ನಾದಿನಿ ಇವರ್‍ಯಾರೂ ಬಿಡಿಸೋದಕ್ಕೆ ಬರೋಲ್ಲ. ಅದನ್ನೆಲ್ಲಾ ನಾನೇ ಅನುಭವಿಸಬೇಕು. ನಾನು ಅವನನ್ನು ಮದುವೆಯದಾಗಿನಿಂದ ಮನೆಯು ಬೆಳೆಯುತ್ತಿಲ್ಲವಂತೆ ಮತ್ತೆ ನನ್ನ ಕಾಲ್ಗುಣ ಸರಿ ಇಲ್ಲ ಅಂತ ಹೇಳಿ ಬೈಯುತ್ತಾರೆ. ನಾನು ಹಣ್ಣಿನ ವ್ಯಾಪಾರ ಮಾಡೋದಕ್ಕೆ ಹೋಗಿ ಬಂದರೂ ಸಹ ನನ್ನನ್ನು ಅನುಮಾನದಿಂದ ನೋಡ್ತಾರೆ. ಮನೆಯಲ್ಲಿ ಒಂದೂ ಕೆಲ್ಸನೂ ಕೂಡ ಮಾಡೋದಿಲ್ಲ. ನಾನು ಹಣ್ಣುಗಳನ್ನು ಮಾರಿಕೊಂಡು ಬರಬೇಕು ಮತ್ತೆ ಮನೆಯಲ್ಲಿ ಕೆಲಸಗಳನ್ನು ಮಾಡಬೇಕು. ಮತ್ತೆ ನನ್ನ ಮಕ್ಕಳು ಚಿಕ್ಕವರಿದ್ದಾರೆ ಅವರಿಗೂ ಸಹ ವಿನಾಕಾರಣ ಹೊಡೆಯೋದು, ಬಡಿಯೋದು, ಬೈಯೋದು ಮಾಡ್ತಾರೆ. ಅದಕ್ಕೆ ನನ್ನ ಮಕ್ಕಳನ್ನು ಸಹ

ನನ್ನ ಜೊತೆಲೇ ಕರೆದುಕೊಂಡು ಹೋಗುತ್ತೇನೆ. ಗಂಡ ಕುಡಿದು ಬಂದು ಮನೆಯಲ್ಲಿನ ಕೆಲವು ವಸ್ತುಗಳನ್ನು ಹಾಳು ಮಾಡಿದ್ದಾನೆ. ಮತ್ತೆ ಒಂದು ದಿನ ಕೊಳ್ಳಾಗಿನ ತಾಳಿ ಮತ್ತು ಆಭರಣಗಳನ್ನು ಸಹ ಕಿತ್ತುಕೊಂಡು ಹೋಗಿ ಒತ್ತೆ ಇಟ್ಟು ಕುಡಿಯೋದಕ್ಕೆ ಬಳಸಿದ್ದಾನೆ. ತಾಳಿ ಕಿತ್ತ ದಿನ ನಾನು ಮನೆಬಿಟ್ಟು ತವರು ಮನೆಗೆ ಬಂದುಬಿಟ್ಟೆ. ಮತ್ತೆ ತವರುಮನೆಯಲ್ಲಿ ನಮ್ಮ ಅಮ್ಮ ಚೆನ್ನಾಗಿ ನೋಡಿಕೊಳ್ಳುತ್ತಾರೆ. ಆದರೆ ಅಲ್ಲೇ ಎಷ್ಟು ದಿನ ಅಂತ ಇರೋದು ಸಾರ್ ಅಮ್ಮ ಮತ್ತೆ ನನಗೆ ಬುದ್ದಿವಾದ ಹೇಳಿ ಗಂಡನ ಮನೆಗೆ ಕಳಿಸಿದಳು. ಒಂದು ಸಲ ಬೇರೆ ಮದುವೆ ಆಗಿಬಿಡ್ತೀನಿ ಅಂತ ಹೇಳಿ ಹೆದರಿಸ್ತಾನೆ ಸಾರ್, ಏನ್ ಮಾಡೋದು ಹೆಣ್ಣಾಗಿ ಹುಟ್ಟಿದ ಮೇಲೆ ಅನುಭವಿಸಬೇಕು. ಇವರು ಎಷ್ಟೇ ಕಷ್ಟ ಕೊಟ್ಟರೂ ನನ್ನ ಮಕ್ಕಳನ್ನು ಚೆನ್ನಾಗಿ ಓದಿಸಬೇಕು ಅಂತ ನಿರ್ಧರಿಸಿದ್ದೇನೆ. ಅದಕ್ಕಾಗಿ ಈ ಕಷ್ಟಗಳನ್ನೆಲ್ಲಾ ಅನುಭವಿಸುತ್ತಿದ್ದೇನೆ ಸಾರ್ ಎಂದು ತಮ್ಮ ನೋವನ್ನು ತೋಡಿಕೊಂಡರು.

ಪ್ರಕರಣ ೯

ಮೂವತ್ತಾರು ವರ್ಷ ವಯಸ್ಸಿನ ಅಲುವೇಲಮ್ಮ ಕಮಲಾಪುರದ ನಿವಾಸಿಯಾಗಿದ್ದಾರೆ. ಇವರಿಗೆ ಇಬ್ಬರು ಹೆಣ್ಣು ಮಕ್ಕಳಿದ್ದಾರೆ. ಗಂಡ ಮಂಜುನಾಥ. ಇವರು ಮನೆ ಬಿಟ್ಟು ಹೋಗಿ ೧೦ ವರ್ಷಗಳಾಗಿವೆ. ಅಲುವೇಲಮ್ಮ ಅವರಿಗೆ ಚಿಕ್ಕ ವಯಸ್ಸಿನಲ್ಲೇ ಮದುವೆಯಾಗಿದೆ. ಮದುವೆಯಾಗಿ ಬಹಳ ವರ್ಷಗಳ ವರೆಗೆ ಮಕ್ಕಳೇ ಆಗಿರಲಿಲ್ಲ. ಆಗ ಗಂಡನಿಂದ ದಿನಾಲೂ ಹಿಂಸೆಯನ್ನು ಅನುಭವಿಸುತ್ತಲೇ ಇದ್ದಾರೆ. ಅವರೇ ಹೇಳುವ ಹಾಗೆ "ನನ್ನ ಗಂಡ ವರದಕ್ಷಿಣೆ ತಂದಿಲ್ಲ ಎಂದು ದಿನಾಲೂ ಹೊಡೆಯುತ್ತಿದ್ದ ಸಾರ್. ಒಂದು ದಿನ ಕಾದ ಕಲಾಕೆಯಿಂದ ಕೈಮೇಲೆ ಬರೆ ಹಾಕಿದ್ದಾನೆ. ಮತ್ತೆ ಮಕ್ಕಳಾಗಲಿಲ್ಲ ಅಂತ ಹೇಳಿನೂ ಹೊಡೆದಿದ್ದಾನೆ. ಅವನು ತನ್ನ ಅಕ್ಕನ ಮಾತನ್ನು ಕೇಳಿ ದಿನಾಲೂ ಹೊಡೆಯುತ್ತಿದ್ದ ಸಾರ್, ಅವರ ಅಕ್ಕನಿಗೆ ನನ್ನನ್ನು ಕಂಡ್ರೆ ಆಗೋದಿಲ್ಲ. ಅವಳು ನನ್ನ ಬಗ್ಗೆ ದಿನಾಲೂ ಚಾಡಿ ಹೇಳುತ್ತಿದ್ದಳು. ಅದನ್ನ ಕೇಳಿ ಗಂಡ ಹೊಡೆಯುತ್ತಿದ್ದ. ಅತ್ತೆ, ಮಾವ ಯಾರೂ ಇಲ್ಲ ಸಾರ್, ನನ್ನ ಗಂಡನ ಅಕ್ಕನದೇ ನನಗೆ ದೊಡ್ಡ ಕಾಟವಾಗಿತ್ತು. ನಾನು ಕೂಲಿ ಕೆಲಸಕ್ಕೆ ಹೋಗುತ್ತೇನೆ. ಮತ್ತೆ ನನ್ನ ಗಂಡನಿಗೆ ಏನು ತಿಳಿಯಿತೋ ಗೊತ್ತಿಲ್ಲ ಸಾರ್ ಒಂದು ದಿನ ಮನೆಯನ್ನೇ ಬಿಟ್ಟು ಹೋದ. ಅವನು ಹೋಗಿ ೧೦ವರ್ಷಗಳಾದವು. ಎಲ್ಲಿಗೆ ಹೋಗಿದ್ದಾನೋ ಒಂದೂ ಗೊತ್ತಿಲ್ಲ. ಇಲ್ಲಿ ನೋಡಿದರೆ ನಾವು ಬಾಡಿಗೆ ಮನೆಯಲ್ಲಿದ್ದೇವೆ. ಈ ಮನೆ ಬಾಡಿಗೆ ಕಟ್ಟೋದಕ್ಕೂ ಆಗೋಲ್ಲ ಸಾರ್ ನಮಗೆ ಅಂತಹ ಕೆಟ್ಟ ಪರಿಸ್ಥಿತಿ ನಮ್ಮದು. ಆದರೂ ಸಹ ಕೂಲಿಕೆಲಸ ಮಾಡಿಕೊಂಡು ಜೀವನ ಸಾಗಿಸುತ್ತಿದ್ದೇವೆ. ಗಂಡ ಮನೆಬಿಟ್ಟು ಹೋದಮೇಲಂತೂ ನನ್ನ ಕಷ್ಟ ಹೇಳೋದಕ್ಕೆ ಆಗೋಲ್ಲ. ಯಾಕೆಂದರೆ ನನ್ನ ಗಂಡನ ಅಕ್ಕ ದಿನಾಲೂ ನನ್ನನ್ನು ಕೆಟ್ಟ ಕೆಟ್ಟ ಶಬ್ದಗಳಿಂದ ಬೈಯುತ್ತಾನೇ ಇದ್ದಳು. ಇದ್ದ ಒಬ್ಬ ಗಂಡನನ್ನು ಸರಿಯಾಗಿ ನೋಡಿಕೊಳ್ಳಲಿಲ್ಲ, ಅವನು ಮನೆಬಿಟ್ಟು ಹೋಗೋದಕ್ಕೆ ನೀನೇ ಕಾರಣ, ನನ್ನ ತಮ್ಮನಿಗೆ ಮೋಸ ಮಾಡಿಬಿಟ್ಟೆ, ನೀನು ಎಲ್ಲಿಗಾದ್ರು ಹೋಗಿ ಸಾಯಿ ಹೀಗೆ ನಾನಾ ರೀತಿಯಲ್ಲಿ ಬೈಯ್ಯುತ್ತಿದ್ದಳು. ಈ ಕಾಟ ತಾಳೋದಕ್ಕೆ ಆಗದೆ ಆ ಮನೆಯನ್ನು ಬಿಟ್ಟು ಬಂದುಬಿಟ್ಟೆ. ಈಗ ನಾನು ಮತ್ತು ನನ್ನ ಇಬ್ಬರು ಹೆಣ್ಣುಮಕ್ಕಳು ಮಾತ್ರ ಇರೋದು.

ಹಂಗೆ ನಮ್ಮ ಜೀವನ ನಡಿತಾ ಇದೆ. ಅವನು ಮಾಡಿದ ಕೆಲಸಕ್ಕೆ ನಾನು ನೋವುಗಳನ್ನು ಅನುಭವಿಸುತ್ತಿದ್ದೇನೆ ಎಂದು ಅಳುತ್ತಾ ತಮ್ಮ ನೋವನ್ನು ತೋಡಿಕೊಂಡರು.

ಪ್ರಕರಣ ೧೦

ಕಮಲಾಪುರದ ಚೌಡಿಕೇರಿಯಲ್ಲಿ ವಾಸವಾಗಿರುವ ಕಾಮಾಕ್ಷಿ ನಾಯಕ ಜಾತಿಗೆ ಸೇರಿದವರು. ಇವರ ಮನೆಯಲ್ಲಿ ೩ಜನ ಸದಸ್ಯರು. ಕಾಮಾಕ್ಷಿ, ಅವರ ತಾಯಿ ಮತ್ತು ಒಬ್ಬನೇ ಮಗ. ಕಾಮಾಕ್ಷಮ್ಮನವರು ಗಂಡನನ್ನು ಬಿಟ್ಟು ಬಹಳ ವರ್ಷಗಳಾಗಿವೆ. ಅವರು ಹೇಳುವಂತೆ ನನ್ನ ಗಂಡನ ಹೆಸರು ಈರಪ್ಪ. ಇವನು ತುಂಬಾ ಕೆಟ್ಟವನು ಸಾರ್ ಇವನಿಗೆ ಇಂಥಹ ಚಟ ಇಲ್ಲ ಅನ್ನೋ ಹಾಗೇ ಇಲ್ಲ ಎಲ್ಲಾ ಚಟಗಳೂ ಇದ್ದವು. ಕುಡಿಯೋದು, ಸೂಳೆಯರನ್ನು ಮಾಡೋದು, ಜೂಜು ಆಡುವುದು ಹಿಂಗೆ ಎಲ್ಲಾ ಚಟಗಳೂ ಇದ್ದವು. ಅದರಲ್ಲಿಯೂ ಹೆಣ್ಣಿನ ಸಂಗ ಮಾಡೋದು ತುಂಬಾ ಇತ್ತು. ಇವನು ಇದೇ ಊರಿನ ಬೇರೆ ಹೆಣ್ಣಿನ ಜೊತೆ ಸಂಬಂಧ ಇಟ್ಟುಕೊಂಡಿದ್ದ. ಕಟ್ಟಿಕೊಂಡವಳಿಗಿಂತ ಅವನಿಗೆ ಇಟ್ಟುಕೊಂಡವಳೇ ಹೆಚ್ಚಾಗಿಬಿಟ್ಟಳು ಸಾರ್. ಈ ವಿಷಯ ಗೊತ್ತಾಗಿ ಒಂದು ದಿನ ಕೇಳಿದರೆ ಅದಕ್ಕೆ ಸಿಕ್ಕಾಪಟ್ಟೆ ಹೊಡೆದು ಬಿಟ್ಟ ಸಾರ್. ಮತ್ತೆ ನೀನು ಕಪ್ಪಾಗಿದ್ದೀಯ ಚೆನ್ನಾಗಿಲ್ಲ, ತೆಳ್ಳಗಿದ್ದೀಯ ಅಂತ ಹೇಳಿ ಬೈಯುತ್ತಿದ್ದ. ಹಂಗಾಗಿ ನಾನು ಗಂಡನ ಮನೆಯನ್ನು ಬಿಟ್ಟು ತವರು ಮನೆಗೆ ಬಂದು ಬಿಟ್ಟೆ. ನಾನು ಆ ಮನೆಯನ್ನು ಬಿಟ್ಟು ಬಂದ ಕೂಡಲೆ ಇಟ್ಟುಕೊಂಡವಳನ್ನು ಮನೆಗೆ ಕರೆದುಕೊಂಡು ಬಂದ. ಇದನ್ನು ನಮ್ಮ ಅತ್ತೆಮಾವ ಯಾರೂ ಏನೂ ಅನ್ನಲಿಲ್ಲ. ಆವತ್ತೆ ನಾನು ನನ್ನ ಗಂಡ ನನ್ನ ಪಾಲಿಗೆ ಸತ್ತುಹೋದ ಎಂದು ತೀರ್ಮಾನಿಸಿದೆ. ಅದಕ್ಕೂ ಮೊದಲು ನನ್ನನ್ನು ಮತ್ತೆ ಮನೆಗೆ ಕರೆದುಕೊಂಡು ಹೋಗಲು ಬರುತ್ತಾನೆ ಅಂತ ತಿಳಿದಿದ್ದೆ. ಆದರೆ ಬರಲೇ ಇಲ್ಲ. ತನ್ನ ಮಗಳ ಮುಖವನ್ನಾದರೂ ನೋಡೋದಕ್ಕೆ ಬರಲಿಲ್ಲ. ಇಲ್ಲಿ ಅಮ್ಮ ಒಂದೇ ಇರೋದು ನಾವಿಬ್ಬರು ಜೊತೆಗೆ ಸೇರಿ ಮೂವರು ವಾಸ ಮಾಡ್ತಾ ಇದ್ದೀವಿ. ಮತ್ತೆ ಅಮ್ಮನೂ ಸಹ ಅಲ್ಲಿಗೆ ಹೋಗಬೇಡ ಅಂತ ಹೇಳುತ್ತಿದ್ದಾಳೆ. ಕೌಟುಂಬಿಕ ಹಿಂಸೆ ತಡೆ ಕಾಯಿದೆಯ ಬಗ್ಗೆ ತಿಳಿದಿದೆಯೇ? ಎಂದು ಪ್ರಶ್ನಿಸಿದಾಗ, ಇಲ್ಲ ಸಾರ್ ನನಗೆ ಓದೋಕೆ ಬರಲ್ಲ, ಬರೆಯೋಕು ಬರಲ್ಲ ಅಂತವೆಲ್ಲ ಎಲ್ಲಿ ಗೊತ್ತಾಗಬೇಕು ನಿಮ್ಮಂಥವರು ಹೇಳಿದರೆ ಗೊತ್ತಾಗುತ್ತವೆ ಎಂದರು. ನಿಮ್ಮ ಜಗಳಕ್ಕೆ ಸಂಬಂಧಿಸಿದಂತೆ ಹಿರಿಯರು ಪಂಚಾಯ್ತಿ ಏನಾದರೂ ಮಾಡಿದರಾ? ಎಂದಾಗ ಇಲ್ಲ ಸಾರ್ ಎಂದರು. ಒಂದು ವೇಳೆ ಪಂಚಾಯ್ತಿ ಮಾಡಿದರೆ ಮತ್ತೆ ನನಗೇ ಬುದ್ಧಿವಾದ ಹೇಳ್ತಾರೆ. ಅಂದ್ಕೊಂಡು ಯಾವ ಪಂಚಾಯ್ತಿನೂ ಸೇರಿಸಲಿಲ್ಲ. ಈಗ ನಾನು ದುಡಿಯುತ್ತಿದ್ದೇನೆ ಮಗನೂ ದುಡಿಯುತ್ತಿದ್ದಾನೆ. ಈಗ ಸ್ವಲ್ಪ ಸುಧಾರಿಸಿಕೊಂಡಿದ್ದೀವಿ ಎಂದು ಹೇಳಿದರು.

ಮೇಲಿನ ಎಲ್ಲಾ ಪ್ರಕರಣಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಈ ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ಸಂರಕ್ಷಣಾ ಕಾಯಿದೆಯ ಬಗ್ಗೆ ಯಾರಿಗೂ ಅರಿವೇ ಇಲ್ಲದಂತಾಗಿದೆ. ಮುಖ್ಯವಾಗಿ ಮಹಿಳೆಯರಿಗೆ ಕಾಯಿದೆಯ ಬಗ್ಗೆ ಏನೂ ತಿಳಿದಿಲ್ಲ. ೨೦೦೫ರಲ್ಲೇ ಜಾರಿಗೆ ಬಂದಿದ್ದರೂ ಸಹ ಈ ಕಾಯಿದೆ ಸಮರ್ಥವಾಗಿ

ಜಾರಿಗೊಂಡಿಲ್ಲ. ಕಮಲಾಪುರ ಪಟ್ಟಣವೊಂದರಲ್ಲಿನ ಕೆಲವು ಪ್ರಕರಣಗಳನ್ನು ಮಾತ್ರ ಇಲ್ಲಿ ತಿಳಿಸಲಾಗಿದೆ. ಈ ಪ್ರಕರಣಗಳಲ್ಲೆಲ್ಲಾ ಮಹಿಳೆ ಯಾವ ರೀತಿಯಲ್ಲಿ ಹಿಂಸೆಯನ್ನು ಅನುಭವಿಸುತ್ತಿದ್ದಾಳೆ ಎಂಬುದು ತಿಳಿದು ಬರುತ್ತದೆ. ಈ ಪ್ರಕರಣಗಳ ರೀತಿಯಲ್ಲಿಯೇ ಇಡೀ ಕಮಲಾಪುರ ಪಟ್ಟಣದ ಎಲ್ಲಾ ಕುಟುಂಬಗಳಲ್ಲೂ ಮಹಿಳೆ ಹಿಂಸೆಯನ್ನು ಅನುಭವಿಸುತ್ತಿರುವುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಕೊಳ್ಳಲಾಗಿದೆ. ಹೆಚ್ಚಾಗಿ ಕುಡುಕ ಗಂಡನಿಂದ ಮತ್ತು ಅತ್ತೆ, ಮಾವಂದಿರಿಂದ ಹಿಂಸೆಯನ್ನು ಅನುಭವಿಸುತ್ತಿರುವ ಪ್ರಕರಣಗಳು ಕಂಡುಬರುತ್ತವೆ. ಮತ್ತು ಕಾಯಿದೆಗೆ ಸಂಬಂಧಿಸಿದಂತೆ ಕೇಳಿದ ಪ್ರಶ್ನೆಗಳಿಗೆ ಅವರಿಂದ ಬಂದ ಉತ್ತರ ನಿರಾಶಾದಾಯಕವಾಗಿದೆ. ಏಕೆಂದರೆ ಇಲ್ಲಿರುವ ಬಹಳಷ್ಟು ಮಹಿಳೆಯರು ಅನಕ್ಷರಸ್ಥರಾಗಿದ್ದು ಕೇವಲ ಕುಟುಂಬಕ್ಕೆ ಮಾತ್ರ ಸೀಮಿತವಾಗಿರುವುದು ಕಂಡುಬರುತ್ತದೆ. ಹಾಗೆಯೇ ಒಂದು ಚೌಕಟ್ಟಿನಡಿಯಲ್ಲಿ ಅಂದರೆ ಪುರುಷ ಪ್ರಧಾನ ಮೌಲ್ಯಗಳ ಚೌಕಟ್ಟಿನಡಿಯಲ್ಲಿ ಜೀವಿಸುತ್ತಿರುವುದು ತಿಳಿದುಬರುತ್ತದೆ. ವರದಕ್ಷಿಣೆ ತರಲಿಲ್ಲವೆಂದು, ಗಂಡು ಮಕ್ಕಳಾಗಲಿಲ್ಲವೆಂದು ಹೀಗೆ ನಾನಾ ಕಾರಣಗಳಿಗೆ ಹಿಂಸೆಯನ್ನು ಅನುಭವಿಸುತ್ತಿದ್ದಾರೆ. ಒಟ್ಟಿನಲ್ಲಿ ಇವರ್‍ಯಾರಿಗೂ ಈ ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ಸಂರಕ್ಷಣಾ ಕಾಯಿದೆಯ ಬಗ್ಗೆ ಅರಿವಿಲ್ಲದಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದುಕೊಳ್ಳಲಾಗಿದೆ.

ಅಧ್ಯಾಯ ೫

# ಕಾಯಿದೆಯ ಅರಿವಿನ ಅಗತ್ಯತೆ

ಭಾರತದ ಸಂವಿಧಾನವು ಸ್ತ್ರೀ ಪುರುಷರಿಗೆ ಸಮಾನ ಅವಕಾಶಗಳನ್ನು ಸಮಾನ ಹಕ್ಕುಗಳನ್ನು ಒದಗಿಸಿದೆ. ಇದರಿಂದ ಭಾರತೀಯ ಮಹಿಳೆಯರಿಗೆ ಒಂದು ಹೊಸ ಪ್ರಪಂಚವೇ ತೆರೆದಂತಾಯಿತು. ಅಂದರೆ ಮಹಿಳೆಯರ ಅಭಿವೃದ್ಧಿಗೆ ಸಂಬಂಧಿಸಿದಂತೆ ಹಲವಾರು ರೀತಿಯ ಕಾನೂನುಗಳನ್ನು ರಚಿಸಲಾಯಿತು. ಆದರೆ ಇವುಗಳ ಬಗ್ಗೆ ಜನರಿಗೆ ಅರಿವೇ ಇಲ್ಲದಂತಾಗಿ ಬಿಟ್ಟಿದೆ. ಉದಾಹರಣೆಗೆ ವರದಕ್ಷಿಣೆಗೆ ಸಂಬಂಧಿಸಿದಂತೆ ವರದಕ್ಷಿಣೆ ನಿಷೇಧ ಕಾಯಿದೆಯನ್ನು ಜಾರಿಗೆ ತರಲಾಯಿತು. ಆದರೆ ಇದರ ಬಗ್ಗೆ ಯಾರಿಗೂ ಅರಿವಿಲ್ಲವಾಗಿದೆ. ಮತ್ತು ಈ ಕಾಯಿದೆಯ ಬಗ್ಗೆ ತಿಳಿದುಕೊಂಡಿದ್ದರೂ ಸಹ ವರದಕ್ಷಿಣೆಯನ್ನು ತೆಗೆದುಕೊಳ್ಳುವದು ಅನಾಯಾಸವಾಗಿ ನಡೆಯುತ್ತಲೇ ಇದೆ. ಭಾರತ ದೇಶವು ಹಳ್ಳಿಗಳಿಂದ ಕೂಡಿದ ದೇಶವಾಗಿರುವುದರಿಂದ ಇಲ್ಲಿನ ಪ್ರತಿಯೊಬ್ಬ ಪ್ರಜೆಗೂ ಸಹ ಈ ಕಾಯಿದೆಯ ಬಗ್ಗೆ ಅರಿವಿಲ್ಲದಿರುವುದು ಇಂದು ನಮಗೆಲ್ಲಾ ತಿಳಿದಿರುವುದೇ ಆಗಿದೆ. ಈ ವರದಕ್ಷಿಣೆ ಪದ್ಧತಿಯಿಂದ ಮಹಿಳೆ ನಾನಾ ವಿಧದಲ್ಲಿ ಹಿಂಸೆಯನ್ನು ಅನುಭವಿಸುತ್ತಲೇ ಇದ್ದಾಳೆ. ವರದಕ್ಷಿಣಾ ಹತ್ಯೆಗಳು, ಆತ್ಮಹತ್ಯೆಗಳು ನಡೆಯುತ್ತಲೇ ಇವೆ. ಮುಖ್ಯವಾಗಿ ಪ್ರಜ್ಞಾವಂತ ಸಮಾಜದಲ್ಲಿಯೂ ಕೂಡ ಈ ಹತ್ಯೆಗಳು ನಡೆಯುತ್ತಿರುವುದು ಕಂಡುಬರುತ್ತದೆ. ಇದು ಕೇವಲ ಒಂದು ಕಾನೂನಿನ ಉದಾಹರಣೆಯಷ್ಟೇ. ಇದೇ ರೀತಿಯ ಹಲವಾರು ಕಾನೂನುಗಳು ಜಾರಿಗೊಂಡಿದ್ದರೂ ಸಹ ಮಹಿಳೆಯರಲ್ಲಿ ಇಂದಿಗೂ ಅವುಗಳ ಬಗ್ಗೆ ಅರಿವು ಇಲ್ಲದಿರುವುದನ್ನು ಗ್ರಾಮೀಣ ನಗರ ಪ್ರದೇಶಗಳಲ್ಲಿ ಮಹಿಳೆಯ ಮೇಲೆ ನಡೆಯುವ ಹಿಂಸೆಗಳನ್ನು ಆಧರಿಸಿ ತಿಳಿಯಬಹುದಾಗಿದೆ. ಈ ನಿಟ್ಟಿನಲ್ಲಿ ಮಹಿಳಾ ಪರವಾದ ಕಾನೂನುಗಳ ಬಗ್ಗೆ ಅರಿವನ್ನು ಮೂಡಿಸುವುದು ತುಂಬಾ ಅವಶ್ಯಕವಾಗಿದೆ. ಈ ಮಹಿಳಾ ಪರ ಕಾನೂನುಗಳ ಸಾಲಿಗೆ ಸೇರುವ ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ಸಂರಕ್ಷಣಾ ಕಾಯ್ದಿಯ ಬಗ್ಗೆ ಮಹಿಳೆಯರಲ್ಲಿ ಜಾಗೃತಿಯನ್ನುಂಟುಮಾಡುವುದೂ ಕೂಡ ಇಂದು ಅವಶ್ಯಕವಾಗಿದೆ. ಮಹಿಳೆಯರ ಈ ಕಾಯ್ದೆಯ ಬಗ್ಗೆ ಮಹಿಳೆಯರ ಅರಿವಿನ ಅಗತ್ಯತೆಯನ್ನು ಎರಡು ವಿಭಾಗಗಳಲ್ಲಿ ವಿಂಗಡಿಸಬಹುದಾಗಿದೆ.

**೫.೧. ಫಲಾನುಭವಿಗಳನ್ನು ಅನುಲಕ್ಷಿಸಿ**

ಈ ಕಾಯಿದೆಯಲ್ಲಿ ಫಲಾನುಭವಿಗಳು ಎಂದರೆ ಮಹಿಳೆಯರೇ. ಮಹಿಳೆಯರ ಸಂರಕ್ಷಣೆಗಾಗಿಯೇ ರೂಪಿಸಲ್ಪಟ್ಟಿರುವ ಈ ಕಾಯಿದೆಯ ಬಗ್ಗೆ ಅವರಿಗೆ ಅರಿವನ್ನುಂಟುಮಾಡುವುದು ಅವಶ್ಯಕವಾಗಿದೆ.

೨೦೦೫ರಲ್ಲಿಯೇ ಈ ಕಾಯಿದೆ ಜಾರಿಗೆ ಬಂದಿದ್ದರೂ ಸಹ ಇದರ ಅರಿವು ಮಹಿಳೆಯರಲ್ಲಿ ಇಲ್ಲದಿರುವುದು ಒಂದು ಶೋಚನೀಯ ಸಂಗತಿಯಾಗಿದೆ. "ವೈವಾಹಿಕ ಜೀವನದಲ್ಲಿ ಗಂಡ ತನ್ನ ಹೆಂಡತಿಯನ್ನು ಸರಿಯಾಗಿ ನೋಡಿಕೊಳ್ಳದೆ ಅವಳಿಗೆ ತೊಂದರೆ ಮಾಡಬೇಕೆಂಬ ಉದ್ದೇಶದಿಂದ ಮೂಲಭೂತ ಅವಶ್ಯಕತೆಗಳಾದ ಆಹಾರ, ಬಟ್ಟೆ, ವಸತಿ ಇವುಗಳನ್ನು ಒದಗಿಸದೆ, ಇವುಗಳಿಂದ ಅವಳನ್ನು ವಂಚಿತಳನ್ನಾಗಿಸುವುದು, ಅಪರಾಧವಾಗಿರುತ್ತದೆ".[೧] ಇಂದು ಕುಟುಂಬದಲ್ಲಿ ಮಹಿಳೆ ಮಾನಸಿಕವಾಗಿ, ದೈಹಿಕವಾಗಿ, ಲೈಂಗಿಕವಾಗಿ ಹಿಂಸೆಗೆ ಒಳಗಾಗುತ್ತಿರುವುದನ್ನು ನಾವು ಹಿಂದಿನ ಪ್ರಕರಣ ಅಧ್ಯಾಯಗಳಿಂದ ತಿಳಿದುಕೊಳ್ಳಬಹುದಾಗಿದೆ. ಈ ರೀತಿಯ ತನ್ನ ಮೇಲಾದ ಅಥವಾ ಮೇಲಾಗುತ್ತಿರುವ ಹಿಂಸೆಯನ್ನು ತನ್ನ ಹತ್ತಿರದವರ ಮುಂದೆ ವ್ಯಕ್ತಪಡಿಸಿದಾಗ ಅವಳು ಹಿಂಸೆಯನ್ನು ಅನುಭವಿಸುತ್ತಿದ್ದಾಳೆ ಎಂದು ತಿಳಿದೂ ಆ ಮಹಿಳೆಗೆ ನೀನು ಸುಧಾರಿಸಿಕೊಂಡು ಹೋಗಬೇಕು. ಸಂಸಾರದ ಗುಟ್ಟುರಟ್ಟಾಗುವುದು ಬೇಡ, ಗಂಡ ದೇವರಿದ್ದ ಹಾಗೆ, ಗಂಡನಿಂದ ದೂರವಾಗಿ ನೀನು ಹೇಗೆ ಬದುಕಬಲ್ಲೇ? ಈ ಸಮಾಜದಲ್ಲಿ ಒಂಟಿ ಹೆಂಗಸು ಬದುಕುವುದು ತುಂಬಾ ಕಷ್ಟ. ನೀನೇ ಎಲ್ಲವನ್ನು ಸುಧಾರಿಸಿಕೊಂಡು ಹೋಗಬೇಕು ಎಂದು ಹಲವಾರು ರೀತಿಯಲ್ಲಿ ಬುದ್ಧಿವಾದವನ್ನು ಹೇಳುತ್ತಾರೆ. ಆದರೆ ಹಿಂಸೆಯನ್ನು ನೀಡಿದ ವ್ಯಕ್ತಿಗೆ ಯಾವುದೇ ರೀತಿಯ ಬುದ್ಧಿವಾದ ಹೇಳುವ ಪ್ರಯತ್ನವಾಗಲೀ ಅಥವಾ ಕಾನೂನಿನ ಅಡಿಯಲ್ಲಿ ಶಿಕ್ಷೆಗೆ ಒಳಪಡಿಸುವ ಬಗ್ಗೆಯಾಗಲೀ ಯಾವುದೇ ಹೇಳಿಕೆಗಳು ಕೇಳಿಬರುವುದಿಲ್ಲ. ಇದಕ್ಕೆ ಕಾರಣ ಕಾನೂನಿನ ಬಗ್ಗೆ ಅರಿವು ಇಲ್ಲದಿರುವುದು.

ಕುಟುಂಬ ಜೀವನದಲ್ಲಿ ಮಹಿಳೆ ಯಾವ ರೀತಿಯಲ್ಲಿ ಹಿಂಸೆಯನ್ನು ಅನುಭವಿಸುತ್ತಿದ್ದಾಳೆ ಎಂಬುದು ಅವಳಿಗೆ ಮಾತ್ರ ತಿಳಿದಿರುತ್ತದೆ. ಅವುಗಳನ್ನು ವ್ಯಕ್ತಪಡಿಸಲು ಕೆಲವೊಮ್ಮೆ ಅವಳಿಗೆ ಕಷ್ಟವಾಗಬಹುದು ಅಥವಾ ಹೇಳಲಾಗದಂತಹ ಅಸಾಧ್ಯ ಪರಿಸ್ಥಿತಿ ಇರುತ್ತದೆ. ಅಂತೆಯೇ ಕೆಲವೊಂದು ವಿಚಾರಗಳನ್ನು ಮನಸ್ಸಿನಿಂದ ಹೊರಗೆ ಹಾಕಲು ಆ ಮಹಿಳೆಗೆ ಆಗುವುದಿಲ್ಲ. ಹಾಗಾಗಿ ಇಂತಹ ಮನಸ್ಥಿತಿಯನ್ನು ನಾವು ಸೂಕ್ಷ್ಮವಾಗಿ ಅರಿತು ಕಾನೂನಿನ ಬಗ್ಗೆ ಅರಿವನ್ನು ಮೂಡಿಸುವುದು ಅಗತ್ಯವಾಗಿದೆ.

ಕುಟುಂಬದಲ್ಲಿ ಎಲ್ಲಾ ವ್ಯವಹಾರಗಳೂ ಕೂಡ ಪುರುಷನ ಕೈಯಲ್ಲಿರುತ್ತವೆ. ಅವನು ಹೇಳಿದ ಹಾಗೆ ಕುಟುಂಬದ ಇತರ ಸದಸ್ಯರು ಕೇಳಬೇಕಾಗುತ್ತದೆ. ಇದು ಎಲ್ಲಾ ವರ್ಗ, ಜಾತಿ, ಜನಾಂಗಗಳಲ್ಲಿಯೂ ಕಂಡುಬರುವ ಸಾಮಾನ್ಯ ಸಂಗತಿಯಾಗಿದೆ. ಇಲ್ಲಿ ಪುರುಷನೆಂದರೆ ದುಡಿಯುವವನು, ಹಣಗಳಿಸುವವನು ಎಂದು ಮಹಿಳೆ ಎಂದರೆ ಮನೆಗೆಲಸ, ಅಡುಗೆ ಕೆಲಸ, ಮಕ್ಕಳ ಪಾಲನೆ ಪೋಷಣೆ, ಮಾಡುವವಳು ಎಂಬುದು ರೂಢಿಗತವಾಗಿ ಬಂದು ಬಿಟ್ಟಿದೆ. ಹಾಗಾಗಿ ಮನೆಯಲ್ಲಿನ ಅಧಿಕಾರವೆಲ್ಲವೂ ಪುರುಷನ ಕೈಗೆ ಮತ್ತು ಬಾಧ್ಯತೆಗಳೆಲ್ಲವೂ ಮಹಿಳೆಯರಿಗೆ ದೊರೆಯಿತು. ಇದರಿಂದಾಗಿ ಮಹಿಳೆ ಕೇವಲ ನಾಲ್ಕುಗೋಡೆಗಳ ಮಧ್ಯೆ ಸಿಲಿಕಿಕೊಂಡು ನರಳುತ್ತಿರುವುದು ವಾಸ್ತವದಲ್ಲಿ ಕಂಡುಬರುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿನ ಕುಟುಂಬಗಳಲ್ಲಿ ಮಹಿಳೆಯರು ಅನುಭವಿಸುವ ಹಿಂಸೆಯೇ ಬೇರೆ ಮತ್ತು ನಗರ ಪಟ್ಟಣಗಳಲ್ಲಿ ಮಹಿಳೆಯರು ಅನುಭವಿಸುವ ಹಿಂಸೆಯ ಸ್ವರೂಪಗಳೇ ಬೇರೆಯಾಗಿರುತ್ತವೆ. ಗ್ರಾಮೀಣ ಪ್ರದೇಶಗಳಲ್ಲಿನ ಮಹಿಳೆಯರು

ಅನಕ್ಷರಸ್ಥರಾಗಿದ್ದು ಅವರು ಹೆಚ್ಚಾಗಿ ಧರ್ಮದ ಕಟ್ಟುಪಾಡುಗಳಿಗೆ ಅನುಗುಣವಾಗಿ ಮೂಡನಂಬಿಕೆಗಳಿಗೆ ಬಲಿಯಾಗುತ್ತಿರುವುದನ್ನು ನಾವು ಕಾಣುತ್ತೇವೆ. ಈ ಮೂಡ ನಂಬಿಕೆಗಳೇ ಮಹಿಳೆಯನ್ನು ಬಹಳಷ್ಟು ವಿಧದಲ್ಲಿ ಹಿಂಸಿಸುತ್ತವೆ. ಇವುಗಳೆಲ್ಲವೂ ಸಹ ಪುರುಷ ಮೌಲ್ಯಗಳಿಗೆ ಪೂರಕವಾಗಿ ರೂಪುಗೊಂಡಿರುತ್ತವೆ. ಕುಟುಂಬಗಳಲ್ಲಿ ಯಾವುದೇ ತೀರ್ಮಾನ ಅಥವಾ ನಿರ್ಧಾರಗಳನ್ನು ತೆಗೆದುಕೊಳ್ಳುವವರು ಪುರುಷರೇ ವಿನಃ ಮಹಿಳೆಯರಲ್ಲ. ಹಾಗಾಗಿ ಕುಟುಂಬವು ಮಹಿಳೆಯರಿಗೆ ಯಾವುದೇ ರೀತಿಯ ಸ್ವಾತಂತ್ರ್ಯವನ್ನು ಕೊಡದೇ ಇರುವುದನ್ನು ನಾವು ಕಾಣುತ್ತೇವೆ. ಹಾಗೆಯೇ ಅವಳ ದುಡಿಮೆಗೆ ಸಂಬಂಧಿಸಿದಂತೆ ನಿರ್ಧಾರಗಳನ್ನು ತೆಗೆದುಕೊಳ್ಳುವವರೂ ಸಹ ಪುರುಷರೇ ಆಗಿರುತ್ತಾರೆ ಹಾಗಾಗಿ ಅವಳು ಮನೆಯಿಂದ ಹೊರಹೋಗಿ ದುಡಿಯಲು ಪ್ರಾರಂಭಿಸಿದರೂ ಸಹ ಕುಟುಂಬದ ಮೌಲ್ಯಗಳ ಬಿಗಿ ಹಿಡಿತದಿಂದ ಬಂಧಿಸಲ್ಪಟ್ಟಿರುತ್ತಾಳೆ. ಹಾಗೂ ನಾನಾ ವಿಧದಲ್ಲಿ ಯಾತನೆಗಳನ್ನು ಅನುಭವಿಸುತ್ತಲೇ ಇರುತ್ತಾಳೆ. ಗ್ರಾಮೀಣ ಪ್ರದೇಶಗಳಲ್ಲಿನ ಮಹಿಳೆಯರು ದೈಹಿಕವಾಗಿ, ಲೈಂಗಿಕವಾಗಿ ಮಾನಸಿಕವಾಗಿ ಹೆಚ್ಚಾಗಿ ಹಿಂಸೆಗಳನ್ನು ಅನುಭವಿಸುತ್ತಲೇ ಇರುತ್ತಾರೆ. ಇನ್ನು ನಗರ ಪ್ರದೇಶದ ಮಹಿಳೆಯರನ್ನು ನೋಡಿದಾಗ ಇಲ್ಲಿನ ಕುಟುಂಬಗಳಲ್ಲಿ ಹಿಂಸೆ ನಡೆಯುತ್ತಿದ್ದರೂ ಸಹ ಅದು ಪಕ್ಕದ ಮನೆಯವರಿಗೂ ತಿಳಿದುಬಂದಿರುವುದಿಲ್ಲ ಹಾಗೆ ನಡೆಯುತ್ತಿರುತ್ತದೆ. ಇಲ್ಲಿನ ಮಹಿಳೆಯರು ಗ್ರಾಮೀಣ ಮಹಿಳೆಯರಿಗಿಂತಲೂ ಹೆಚ್ಚಿನ ರೀತಿಯಲ್ಲಿ ಧರ್ಮದ ಚೌಕಟ್ಟಿಗೆ ಒಳಗಾಗಿರುತ್ತಾರೆ. ಆದರೆ ಇದು ಕುಂಡಬರುವುದಿಲ್ಲ. ಇಲ್ಲಿನ ಕುಟುಂಬಗಳಲ್ಲಿನ ಮಹಿಳೆಯರು ಅತೀ ಹೆಚ್ಚಾಗಿ ಮಾನಸಿಕ ಹಿಂಸೆಯಿಂದ ತೊಳಲಾಡುತ್ತಿರುತ್ತಾರೆ. ಹಾಗೆಯೇ ವರದಕ್ಷಿಣೆ ಕಿರುಕುಳಗಳು, ಹೆಣ್ಣು ಭ್ರೂಣ ಹತ್ಯೆ, ಹೆಣ್ಣು ಮಕ್ಕಳ ಮಾರಾಟ ಪ್ರಕರಣಗಳು ಅತೀ ಹೆಚ್ಚಾಗಿ ನಡೆಯುವುದು ನಗರ ಪ್ರದೇಶಗಳಲ್ಲಿಯೇ.

ನಗರ ಪ್ರದೇಶಗಳ ಕುಟುಂಬಗಳಲ್ಲಿ ವಿವಾಹ ವಿಚ್ಛೇದನಗಳು ಹೆಚ್ಚಾಗಿ ಜರುಗುತ್ತವೆ. ಈ ಸಂದರ್ಭದಲ್ಲಿ ಕುಟುಂಬದಲ್ಲಿ ನಡೆಯುವ ಹಿಂಸೆಯ ಬಗ್ಗೆ ಎಲ್ಲಾ ಮಾಹಿತಿಗಳು ತಿಳಿದುಬರುತ್ತವೆ. ಇಂತಹ ಸಂದರ್ಭಗಳಲ್ಲಿ ಮಾತ್ರ ಕಾನೂನಿನ ಬಗ್ಗೆ ತಿಳಿದುಕೊಳ್ಳಲು ಪ್ರಯತ್ನಿಸುತ್ತಾರೆ. ಆದರೆ ಅದಕ್ಕೂ ಮೊದಲು ಕೌಟುಂಬಿಕ ಹಿಂಸೆಗೆ ಸಂಬಂಧಿಸಿದಂತೆ ಒಂದು ಪ್ರತ್ಯೇಕವಾದ ಕಾನೂನು ಇದೆ ಎಂಬುದೂ ಸಹ ಅವರ ಅರಿವಿಗೆ ಬಂದಿರುವುದಿಲ್ಲ. ಹೀಗೆ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಮಹಿಳೆಯರು ಹಲವಾರು ರೀತಿಯಲ್ಲಿ ಯಾತನಾಮಯ ಜೀವನವನ್ನು ನಡೆಸುತ್ತಲೇ ಇದ್ದಾರೆ. ಆದರೆ ಅವರಿಗೆ ಈ ಕಾನೂನಿನ ಬಗ್ಗೆ ಅರಿವು ಎಂಬುದಿಲ್ಲ. ಈ ನಿಟ್ಟಿನಲ್ಲಿ ಈ ಕಾಯಿದೆಯ ಬಗ್ಗೆ ಜನರಲ್ಲಿ ಅರಿವನ್ನು ಮೂಡಿಸುವುದು ಮುಖ್ಯವಾಗುತ್ತದೆ. ಅದರಲ್ಲಿಯೂ ಮಹಿಳೆಯರಿಗೆ ಈ ಕಾಯಿದೆಯ ಬಗ್ಗೆ ಅರಿವು ಇರಬೇಕಾಗುತ್ತದೆ. ಅಂದಾಗ ಮಾತ್ರ ಕೌಟುಂಬಿಕ ಹಿಂಸೆಯಿಂದ ಹೊರಬರಲು ಸಾಧ್ಯವಾಗುತ್ತದೆ.

ಈ ಮಹಿಳೆ ಕುಟುಂಬದಲ್ಲಿ ಎಷ್ಟೇ ಹಿಂಸೆಯನ್ನು ಅನುಭವಿಸುತ್ತಿದ್ದರೂ ಸಹ ಮನೆಯಿಂದ ಹೊರ ಬಂದು ಪೋಲೀಸ್ ಸ್ಟೇಷನ್‌ಗೆ ಹೋಗಿ ಹಿಂಸೆ ನೀಡುವವರ ವಿರುದ್ಧ ಕೇಸನ್ನು ದಾಖಲಿಸುವುದಿಲ್ಲ.

ಮೊದಲನೆಯದಾಗಿ ಸ್ಟೇಷನ್ ಎಂದರೇನೇ ಹೆದರುತ್ತಾಳೆ. ಇನ್ನು ಸ್ಟೇಷನ್ ಮೆಟ್ಟಿಲು ಹತ್ತುವುದಂತೂ ದೂರನೇ ಉಳಿಯಿತು. ಒಂದು ವೇಳೆ ಸ್ಟೇಷನ್ ಮೆಟ್ಟಿಲು ಹತ್ತಿದರೆ ಸಮಾಜದಿಂದ ದೂಷಿಸಲ್ಪಡುತ್ತಾಳೆ. ಮತ್ತೆ ಕುಟುಂಬದಿಂದ್ಲ ನಾನಾ ವಿಧವಾದ ಅಪಮಾನಕರವಾದ ಮಾತುಗಳನ್ನು ಎದುರಿಸಬೇಕಾಗುತ್ತದೆ. ಈ ನಿಟ್ಟಿನಲ್ಲಿ ಈ ಕಾಯಿದೆಯ ಬಗ್ಗೆ ಅರಿವನ್ನು ಮೂಡಿಸುವುದು ಮುಖ್ಯವಾಗುತ್ತದೆ. ಮಹಿಳೆಯರು ಈ ಕಾಯಿದೆಯ ಬಗ್ಗೆ ತಿಳಿದುಕೊಂಡರೆ ಕೌಟುಂಬಿಕ ಹಿಂಸೆಯಿಂದ ಹೊರಬರಲು ಸಾಧ್ಯವಾಗುತ್ತದೆ. ಹಾಗೂ ಒಂದು ಕಾನೂನು ತಮಗೋಸ್ಕಾರ ಜಾರಿಯಲ್ಲಿದೆ ಎಂದು ತಿಳಿದರೆ ಅವರಿಗೆ ಮಾನಸಿಕವಾದ ಒಂದು ಬೆಂಬಲ ದೊರೆತಂತಾಗುತ್ತದೆ.

**೫.೨. ಮಸೂದೆಯ ನಿರ್ವಹಣಾಗಾರರನ್ನು ಅನುಲಕ್ಷಿಸಿ**

ಇಲ್ಲಿ ಕಾನೂನಿನ ನಿರ್ವಹಣಾಗಾರರು ಎಂದರೆ ಸಂರಕ್ಷಣಾಧಿಕಾರಿಗಳು, ಪೋಲೀಸರು, ಮ್ಯಾಜಿಸ್ಟ್ರೇಟರರು, ಡಾಕ್ಟರ್‌ಸ್‌ಗಳು ಮುಂತಾದವರು. ಮುಖ್ಯವಾಗಿ ಒಂದು ಕಾನೂನು ಜಾರಿಗೆ ಬಂದಿದೆ ಎಂದರೆ ಆ ಕಾನೂನು ಸಮರ್ಥವಾಗಿ ಜಾರಿಗೊಳ್ಳಲು ಮತ್ತು ಮುಂದುವರೆಸಿಕೊಂಡು ಹೋಗಲು ಪ್ರತ್ಯೇಕವಾದ ಅಧಿಕಾರಿಗಳು ಇದ್ದೇ ಇರುತ್ತಾರೆ. ಈ ಅಧಿಕಾರಿಗಳು ತಮ್ಮ ಅಧಿಕಾರ ವ್ಯಾಪ್ತಿಯಲ್ಲಿ ಕಾನೂನು ಬಲಿಷ್ಟವಾಗಿ ಜಾರಿಗೊಳ್ಳುವಂತೆ ಮಾಡಬೇಕಾಗುತ್ತದೆ. ಆದರೆ ಇಂದು ಈ ಕಾರ್ಯಗಳು ಯಾವುದೇ ಅಧಿಕಾರಿಯಿಂದ ನಡೆಯುತ್ತಿಲ್ಲ. ಹಾಗಾಗಿ ಕಾನೂನುಗಳ ಬಗ್ಗೆ ಜನರಲ್ಲಿ ಯಾವುದೇ ರೀತಿಯ ಅರಿವು ಇಲ್ಲದಾಗಿದೆ ಮತ್ತು ಹಿಂಸೆ, ಶೋಷಣೆ, ಅತ್ಯಚಾರ ಮುಂತಾದವುಗಳು ಅನಾಯಾಸವಾಗಿ ನಡೆಯುತ್ತಲೇ ಇವೆ. ಇದರಿಂದ ಜನರಲ್ಲಿ ಕಾನೂನುಗಳ ಬಗ್ಗೆ ನಂಬಿಕೆಯೆದಿಲ್ಲದಂತಾಗಿದೆ. ಇಲ್ಲಿ ಮುಖ್ಯವಾಗಿ ಕೌಟುಂಬಿಕ ಹಿಂಸೆಗೆ ಸಂಬಂಧಿಸಿದಂತೆ ಸಂರಕ್ಷಣಾಧಿಕಾರಿಗಳು ಜನರಿಗೆ ಈ ಕಾನೂನುಗಳ ಬಗ್ಗೆ ಅರಿವನ್ನು ಮೂಡಿಸುವಂತಹ ಕೆಲಸಕಾರ್ಯಗಳನ್ನು ಮಾಡುವುದರ ಜೊತೆ ಜೊತೆಗೆ ಕಾನೂನಿನ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಕೆಲಸಕಾರ್ಯಗಳನ್ನು ನಿರ್ವಹಿಸಬೇಕಾಗುತ್ತದೆ. "ಈ ಸಂರಕ್ಷಕ ಅಧಿಕಾರಿಗಳ ಮುಖ್ಯ ಕರ್ತವ್ಯಗಳು ಈ ಕಾಯಿದೆಯ ಅಧ್ಯಾಯ ೩ರ ಕಲಮು ೪ ಮತ್ತು ೫ರಲ್ಲಿ ತಿಳಿಸಿರುವಂತೆ ಬಾಧಿತ ವ್ಯಕ್ತಿಗೆ ಅರ್ಜಿಯನ್ನು ಸಲ್ಲಿಸಿ ಸಂರಕ್ಷಿತ ಆದೇಶದ ಪರಿಹಾರ ಪಡೆಯುವುದಕ್ಕಾಗಿ ಆರ್ಥಿಕ ಪರಿಹಾರಕ್ಕಾಗಿ, ಅಭಿರಕ್ಷೆಯ ಪರಿಹಾರಕ್ಕಾಗಿ ಅಥವಾ ಈ ಕಾಯ್ದೆಯಲ್ಲಿ ಒಂದಕ್ಕಿಂತ ಹೆಚ್ಚು ಆದೇಶಗಳನ್ನು ಪಡೆಯುವುದಕ್ಕಾಗಿ ಅವಳ ಹಕ್ಕುಗಳ ಬಗ್ಗೆ ಸಂಪೂರ್ಣವಾದ ಮಾಹಿತಿಯನ್ನು ತಿಳಿಸಿಕೊಡಬೇಕಾಗುತ್ತದೆ"[7] ಹಾಗಾಗಿ ಮೊದಲು ಹಿಂಸೆಯನ್ನು ಅನುಭವಿಸುವವರು ಅಥವಾ ಹಿಂಸೆಗೆ ಒಳಗಾದವರು ಈ ಎಲ್ಲಾ ಮಾಹಿತಿಗಳನ್ನು ತಿಳಿದುಕೊಂಡರೆ ಹಿಂಸೆಯ ವಿರುದ್ಧ ಹೋರಾಟ ನಡೆಸಲು ಸಹಕಾರಿಯಾಗುತ್ತದೆ. ಮತ್ತು ಆಶ್ರಿತ ಮನೆಗಳಲ್ಲಿ ಇಂದು ಹಲವಾರು ರೀತಿಯಲ್ಲಿ ಅವ್ಯವಹಾರಗಳು ನಡೆಯುತ್ತಿರುವುದು ಕಂಡುಬರುತ್ತದೆ. ಮುಖ್ಯವಾಗಿ ತಮ್ಮ ಅಧಿಕಾರ ವ್ಯಾಪ್ತಿಯಲ್ಲಿ ಬರುವಂತಹ ಕೌಟುಂಬಿಕ ಸಲಹಾ ಕೇಂದ್ರಗಳು ಯಾವ ರೀತಿ ಕಾರ್ಯನಿರ್ವಹಿಸುತ್ತವೆ ಎಂಬುದರ ಬಗ್ಗೆ ಪರಿಶೀಲನೆಯಲ್ಲಿ ತೊಡಗಿರಬೇಕು. ಏಕೆಂದರೆ ಇಂದು ಕೌಟುಂಬಿಕ

ಹಿಂಸೆಯಿಂದ ಬಳಲಿರುವ ಮಹಿಳೆಯರಿಗೆ ಆಶ್ರಯ ಮನೆಗಳಲ್ಲಿರುವಂತೆ ವ್ಯವಸ್ಥೆಯನ್ನು ಮಾಡಲಾಗಿದೆ. ಆದರೆ ಈ ಆಶ್ರಯ ಮನೆಗಳಲ್ಲಿ ಸಹ ಮಹಿಳೆಯರ ಮೇಲೆ ಹಿಂಸೆ ನಡೆಯುತ್ತಿರುವುದು ಕಂಡುಬರುತ್ತದೆ. ಅಂದರೆ ಅಲ್ಲಿ ವಾಸಿಸುವ ಮಹಿಳೆಗೆ ಎಲ್ಲಾ ರೀತಿಯ ಸ್ವಾತಂತ್ರ್ಯವನ್ನು ಕೊಡುವುದರ ಜೊತೆಜೊತೆಗೆ ಎಲ್ಲಾ ರೀತಿಯ ಸೌಲಭ್ಯಗಳನ್ನು ಸಹ ಒದಗಿಸಿಕೊಡಬೇಕು. ಆದರೆ ಇದು ಹೀಗೆ ನಡೆಯುತ್ತಿಲ್ಲ. ಬದಲಾಗಿ ಅಲ್ಲಿ ಆಶ್ರಯ ಪಡೆಯಲು ಬಂದಿರುವ ಮಹಿಳೆಯರನ್ನು ನಾನಾ ವಿಧವಾದ ಕೆಲಸಗಳಿಗೆ ತೊಡಗಿಸಿಕೊಳ್ಳುತ್ತಿರುವುದನ್ನು ಕಾಣಬಹುದಾಗಿದೆ. ಹಾಗೆಯೇ ಕೌಟುಂಬಿಕ ಸಲಹಾ ಕೇಂದ್ರಗಳಲ್ಲಿ ಪ್ರತ್ಯೇಕವಾದ ಕೌನ್ಸಿಲಿಂಗ್ ಕೊಠಡಿ ಇರಬೇಕಾಗುತ್ತದೆ. ಆದರೆ ಇವುಗಳು ಸಹ ಇಲ್ಲದಿರುವುದು ಕಂಡುಬರುತ್ತದೆ. ಹಾಗಾಗಿ ಸಂರಕ್ಷಣಾಧಿಕಾರಿಗಳು ಇವೆಲ್ಲವುಗಳ ಬಗ್ಗೆ ವಿಚಾರಿಸಿ ಇವುಗಳು ಸಮರ್ಥವಾಗಿ ಕೆಲಸ ನಿರ್ವಹಿಸುವಂತೆ ಮಾಡಬೇಕಾಗುತ್ತದೆ.

ಈ ಕಾಯಿದೆಯ ಅರಿವು ಮುಖ್ಯವಾಗಿ ವೈದ್ಯರಿಗೂ ಇರಬೇಕಾಗಿರುತ್ತದೆ. ಏಕೆಂದರೆ ಕುಟುಂಬದಲ್ಲಿ ಜಗಳನ್ನು ಮಾಡಿಕೊಂಡು ದೈಹಿಕವಾಗಿ ಗಾಯಗಳನ್ನು ಮಾಡಿಕೊಂಡು ಚಿಕಿತ್ಸೆಗಾಗಿ ವೈದ್ಯರಲ್ಲಿಗೆ ಬಂದಾಗ ಅವರು ಪೋಲೀಸ್ ಕಂಪ್ಲೇಂಟ್ ಕೊಡಲು ಹೇಳಬೇಕಾಗುತ್ತಿದೆ. ಇದರಿಂದ ಹಿಂಸೆಗೊಳಗಾದ ಮಹಿಳೆಗೆ ಕಾನೂನಿನ ಬೆಂಬಲ ದೊರೆತಂತಾಗುತ್ತದೆ. ವೈದ್ಯರಿಂದ ಜನರಿಗೆ ಕಾನೂನಿನ ಬಗ್ಗೆ ತಿಳಿದುಕೊಳ್ಳಲು ಸಹಕಾರಿಯಾಗುತ್ತದೆ. ಒಂದು ವೇಳೆ ಈ ಕಾಯಿದೆಯ ಬಗ್ಗೆ ವೈದ್ಯರಿಗೆ ಅರಿವಿಲ್ಲದಿದ್ದರೆ ಜನರಿಗೆ ಕಾನೂನುಗಳ ಪರಿಚಯವೇ ಆಗದೆ ಕುಟುಂಬದಲ್ಲಿ ಹಿಂಸೆ ತೀವ್ರವಾಗಲು ಕಾರಣವಾಗಬಹುದಾಗಿದೆ. ಹಾಗಾಗಿ ಕಡ್ಡಾಯವಾಗಿ ವೈದ್ಯರೆಲ್ಲರೂ ಕೂಡ ಇದರ ಬಗ್ಗೆ ಅರಿವನ್ನು ಹೊಂದಿರಬೇಕಾಗುತ್ತದೆ. ಈ ಕಾಯ್ದೆಯ ಪ್ರಕಾರ ಕೌಟುಂಬಿಕ ಹಿಂಸೆಯಿಂದ ಬಳಲಿದ ಮಹಿಳೆಗೆ ಸಂರಕ್ಷಣಾಧಿಕಾರಿ ಅಥವಾ ಸೇವೆ ಒದಗಿಸುವವ ಹೇಳಿದ ನಂತರವೇ ಚಿಕಿತ್ಸೆಯನ್ನು ನೀಡಬೇಕಾಗುತ್ತದೆ ಅಥವಾ ವೈದ್ಯಕೀಯ ಸೌಲಭ್ಯವನ್ನು ನೀಡಬೇಕಾಗುತ್ತದೆ.

ವಾಸ್ತವದಲ್ಲಿ ಎಷ್ಟೋ ಕೌಟುಂಬಿಕ ಹಿಂಸೆಗಳು ಪೋಲೀಸ್ ಠಾಣೆಯ ಮೆಟ್ಟಿಲನ್ನು ಏರುವುದೇ ಇಲ್ಲ. ಏಕೆಂದರೆ ಪೋಲಿಸರೆಂದರೆ ಮತ್ತು ಪೋಲೀಸ್ ಠಾಣೆ ಎಂದರೆ ಜನರಲ್ಲಿ ಅದರಲ್ಲಿಯೂ ಮಹಿಳೆಯರಿಗೆ ಎಲ್ಲಿಲ್ಲದ ಭಯ ಆರಂಭವಾಗುತ್ತದೆ. ಹಾಗಾಗಿ ಕುಟುಂಬದಲ್ಲಿ ಎಷ್ಟೇ ಹಿಂಸೆಯನ್ನು ಅನುಭವಿಸಿದರೂ ಸಹ ಹಿರಿಯರ ಸಮ್ಮುಖದಲ್ಲಿ ಅವುಗಳನ್ನು ಬಗೆಹರಿಸಿಕೊಳ್ಳವಾಗುತ್ತದೆ. ಒಂದು ವೇಳೆ ಮಹಿಳೆ ಗಂಡನ ವಿರುದ್ಧ ಸ್ಟೇಷನ್‌ನಲ್ಲಿ ದೂರನ್ನು ದಾಖಲಿಸಿದ್ದೇ ಆದರೆ ಅಲ್ಲಿಯೂ ಸಹ ಒಪ್ಪಂದಗಳ ಮೂಲಕ ಜಗಳಗಳನ್ನು ಬಗೆಹರಿಸಲಾಗುತ್ತದೆ. ಅಲ್ಲಿಯೂ ಸಹ ಮಹಿಳೆಗೇ ಬುದ್ಧಿವಾದಗಳನ್ನು ಹೇಳಿ ಕಳುಹಿಸಲಾಗುತ್ತದೆ. ಹಿಂಸೆ ನೀಡಿದ ಗಂಡನಿಗೆ ಯಾವುದೇ ಶಿಕ್ಷೆಯನ್ನು ಕೊಡುವುದಿಲ್ಲ. ಆದರೆ ಇದರಿಂದ ಸಮಸ್ಯೆ ಬಗೆಹರಿಯಿತು ಎಂದಲ್ಲ. ಇದು ತಾತ್ಕಾಲಿಕ ಪರಿಹಾರವಾಗುತ್ತದೆ. ಹಾಗಾಗಿ ಕೌಟುಂಬಿಕ ಹಿಂಸೆಯನ್ನು ತಡೆದು ಮಹಿಳೆಗೆ ಶಾಶ್ವತ ಪರಿಹಾರ ದೊರೆಯಬೇಕಾದರೆ ಕೌಟುಂಬಿಕ ಹಿಂಸೆಗೆ ಸಂಬಂಧಿಸಿದಂತೆ ಮೊದಲು DIR (Domestic Insident Report)ನ್ನು ನಮೂಧಿಸಬೇಕಾಗುತ್ತದೆ. ನಂತರ ಮಹಿಳೆಗೆ ನ್ಯಾಯವನ್ನು

ಒದಗಿಸಿಕೊಡಬೇಕಾಗುವಲ್ಲಿನ ಸಾಧ್ಯತೆಗಳ ಬಗ್ಗೆ ತಿಳಿಸಿಕೊಡಬೇಕಾಗುತ್ತದೆ. ಆದರೆ ವಾಸ್ತವದಲ್ಲಿ ಈ ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ಸಂರಕ್ಷಣಾ ಕಾಯಿದೆಯ ಬಗ್ಗೆ ಪೋಲೀಸರಲ್ಲಿಯೇ ಅರಿವು ಇಲ್ಲದಿರುವುದನ್ನು ಕಾಣುತ್ತೇವೆ. ಏಕೆಂದರೆ ಪೋಲೀಸ್ ಇಲಾಖೆಯಲ್ಲಿಯಲ್ಲಿ ಕೆಲಸ ಮಾಡುವಂತಹ ಎಷ್ಟೋ ಮಹಿಳೆಯರು ಕೌಟುಂಬಿಕ ಹಿಂಸೆಯಿಂದಲೂ ಬಳಲುತ್ತಿರುವುದನ್ನು ಕಾಣುತ್ತೇವೆ. ಹಾಗೆಯೇ ಇವರು ಆ ಹಿಂಸೆಗೆ ಯಾವುದೇ ಪರಿಹಾರವನ್ನು ಸಹ ಕಂಡುಕೊಂಡಿರದೇ ಇರುವುದನ್ನು ಸಹ ಕಾಣಲಾಗುತ್ತದೆ. ಹಾಗಾಗಿ ಮೊದಲು ಪೋಲೀಸರು ಈ ಕಾಯ್ದೆಯ ಬಗ್ಗೆ ಅರಿವನ್ನು ಹೊಂದಿರಬೇಕಾದುದು ಅಗತ್ಯವಾಗಿರುತ್ತದೆ. ಈ ನಿಟ್ಟಿನಲ್ಲಿ ಪೋಲೀಸರೂ ಸಹ ಸಮರ್ಥವಾಗಿ ಕಾರ್ಯ ನಿರ್ವಹಿಸಬೇಕಾಗುತ್ತದೆ. ಕೆಲವು ಸಂದರ್ಭಗಳಲ್ಲಿ ಪೋಲೀಸರೂ ಸಹ ಕಾನೂನುಗಳ ಕುರಿತಂತೆ ಗೊಂದಲದಲ್ಲಿ ತೊಳಲಾಡುತ್ತಿರುತ್ತಾರೆ. ಏಕೆಂದರೆ ಮಹಿಳಾ ಪರವಾದ ಎಲ್ಲಾ ಕಾನೂನುಗಳೂ ಸಹ ಒಂದಕ್ಕೊಂದು ಅಂತರ್ ಸಂಬಂಧವನ್ನು ಹೊಂದಿರುತ್ತವೆ.

ಒಟ್ಟಿನಲ್ಲಿ ಕಾನೂನಿನ ಅರಿವು ಫಲಾನುಭವಿಗಳ ಜೊತೆಜೊತೆಯಲ್ಲಿಯೇ ಅವುಗಳ ನಿರ್ವಹಣಾಗಾರರಿಗೂ ಕೂಡ ಅಗತ್ಯವಾಗಿದೆ. ಇಂದು ಈ ಕಾಯಿದೆಯ ಬಗ್ಗೆ ಹಲವಾರು ಪುಸ್ತಕಗಳು ಪ್ರಕಟಣೆಯಾಗುತ್ತಲೇ ಇವೆ. ಆದರೆ ಇವುಗಳ ಯಾವುವೂ ಸಹ ಸಮಾಜದ ಪ್ರತಿಯೊಬ್ಬ ಪ್ರಜೆಗೂ ತಲುಪುವಂತಹ ಕಾರ್ಯಗಳನ್ನು ಮಾಡುವುದಿಲ್ಲ. ಹಾಗಾಗಿ ಜನಹಿತ ಕಾರ್ಯಗಳಲ್ಲಿ ತೊಡಗಿದಾಗ ಮಾತ್ರ ಕಾಯಿದೆಗಳ ಬಗ್ಗೆ ಜನರಲ್ಲಿ ಅರಿವನ್ನು ಮೂಡಿಸಬಹುದಾಗಿದೆ. ಒಟ್ಟಿನಲ್ಲಿ ಕಾನೂನಿನ ಅರಿವು ಫಲಾನುಭವಿಗಳಿಗೆ ಮಾತ್ರವಲ್ಲದೆ ಅವುಗಳನ್ನು ನಿರ್ವಹಿಸುತ್ತಿರುವವರಿಗೂ ಸಹ ಬೇಕಾಗಿದೆ. ಇವರೆಲ್ಲರೂ ಕೂಡ ಈ ಕಾಯಿದೆಯ ಬಗ್ಗೆ ಸಂಪೂರ್ಣವಾಗಿ ತಿಳಿದುಕೊಂಡು ತಮ್ಮ ಕರ್ತವ್ಯಗಳ ಬಗ್ಗೆ ಗಮನಹರಿಸಿದ್ದೇ ಆದಲ್ಲಿ ಸಮಾಜದಲ್ಲಿ ಅದರಲ್ಲಿಯೂ ಕುಟುಂಬಗಳಲ್ಲಿ ಬದಲಾವಣೆಯನ್ನು ತರಬಹುದಾಗಿದೆ. ಮುಖ್ಯವಾಗಿ ಈ ಕಾಯಿದೆಯ ಬಗ್ಗೆ ಸ್ತ್ರೀ ಪುರುಷರಿಬ್ಬರೂ ಸಹ ತಿಳಿದುಕೊಂಡಲ್ಲಿ ಒಂದು ಸುಖೀ ಕುಟುಂಬವನ್ನು ನಿರ್ಮಿಸಬಹುದಾಗಿದೆ. ಈ ನಿಟ್ಟಿನಲ್ಲಿ ಈ ಕಾಯಿದೆಯ ಅರಿವಿನ ಅಗತ್ಯತೆ ಇದೆ.

## ಅಧ್ಯಾಯ ೬

# ಕಾಯ್ದೆಯ ಅನುಷ್ಠಾನದಲ್ಲಿನ ಸವಾಲುಗಳು ಮತ್ತು ಸಾಧ್ಯತೆಗಳು

ಭಾರತವು ಹಳ್ಳಿಗಳಿಂದ ಕೂಡಿದ ದೇಶವಾದ್ದರಿಂದ ಇಲ್ಲಿನ ಜನರು ಬಹಳಷ್ಟು ಅನಕ್ಷರಸ್ಥರಾಗಿರುವುದು ನಮಗೆಲ್ಲಾ ತಿಳಿದಿರುವ ವಿಷಯ. ಭಾರತದ ಸಂವಿಧಾನ ಜಾರಿಗೆ ಬಂದು ಹಲವಾರು ದಶಕಗಳೇ ಕಳೆದರೂ ಸಹ ಈ ಸಂವಿಧಾನದ ಸಂಪೂರ್ಣ ಅರಿವು ನಮ್ಮ ಜನರಿಗಿಲ್ಲ. ಸಂವಿಧಾನದಲ್ಲಿ ಸ್ತ್ರೀ ಪುರುಷರಿಗೆ ಸಮಾನ ಅವಕಾಶಗಳನ್ನು ಕಲ್ಪಿಸಲಾಗಿದೆ. ಆದರೆ ಈ ಅವಕಾಶಗಳನ್ನು ಸರಿಯಾದ ರೀತಿಯಲ್ಲಿ ಬಳಸಿಕೊಳ್ಳುತ್ತಿರುವವರು ಯಾರು ಎಂಬುದನ್ನು ನಾವು ಗಮನಿಸಿದರೆ ಅದರಲ್ಲಿ ಪುರುಷನದೇ ಮೇಲುಗೈ ಸಂವಿಧಾನದಲ್ಲಿನ ಎಲ್ಲಾ ಅವಕಾಶಗಳನ್ನು ಬಳಸಿಕೊಳ್ಳುವುದರಲ್ಲಿ ಮಹಿಳೆಯರ ಪಾತ್ರ ನಗಣ್ಯವಾಗಿರುತ್ತದೆ.

ಒಂದು ಸಮಾಜದಲ್ಲಿ ಮಹಿಳೆಯ ಸ್ಥಾನಮಾನ ನಿರ್ಧಾರವಾಗುವುದು ಆ ಸಮಾಜದಲ್ಲಿ ತನ್ನನ್ನು ತಾನು ಅಭಿವ್ಯಕ್ತಿಗೊಳಿಸಿಕೊಳ್ಳಲು ಅವಳಿಗಿರುವ ಸಮಾನ ಅವಕಾಶಗಳಿಂದ. ಆದರೆ ಈ ಅವಕಾಶಗಳು ಅವಳಿಗೆ ದೊರೆಯದಂತೆ ವ್ಯವಸ್ಥೆಯಲ್ಲಿನ ಪಿತೃಪ್ರಧಾನ ಮೌಲ್ಯಗಳು ನೋಡಿಕೊಳ್ಳುತ್ತಿವೆ. ಸಂವಿಧಾನದಲ್ಲಿ ಹೇಳಿರುವಂತೆ ಸ್ತ್ರೀ ಪುರುಷರ ಸಮಾನತೆ ವಾಸ್ತವದಲ್ಲಿ ಕಂಡುಬರುವುದಿಲ್ಲ. ಮಹಿಳೆಯರ ಅಭಿವೃದ್ಧಿಗೆ ಸಂಬಂಧಿಸಿದಂತೆ ಹಲವಾರು ಕಾನೂನುಗಳು ಜಾರಿಗೆ ಬಂದಿವೆ ನಿಜ. ಆದರೆ ಅವುಗಳು ಸರಿಯಾಗಿ ಅನುಷ್ಠಾನದಲ್ಲಿವೆಯೇ? ಆ ಕಾನೂನುಗಳ ಸಂಪೂರ್ಣವಾದ ಸೌಲಭ್ಯಗಳನ್ನು ಮಹಿಳೆಯರು ಪಡೆದುಕೊಳ್ಳುತ್ತಿದ್ದಾರೆಯೇ? ಮುಖ್ಯವಾಗಿ ಮಹಿಳಾ ಪರವಾದ ಕಾಯಿದೆಗಳ ಅರಿವು ಮಹಿಳೆಯರಿಗಿದೆಯೇ? ಎಂಬಂತಹ ಪ್ರಶ್ನೆಗಳನ್ನು ಹಾಕಿಕೊಂಡರೆ ಸಿಗುವ ಉತ್ತರ ಇಲ್ಲ. ಯಾವುದೇ ಒಂದು ಮಹಿಳಾ ಪರವಾದ ಕಾನೂನು ಜಾರಿಗೆ ಬರುವುದಕ್ಕಿಂತ ಮುಂಚೆಯೇ ಹಲವಾರು ಸಂಕಷ್ಟಗಳನ್ನು, ಪ್ರತಿರೋಧಗಳನ್ನು ಎದುರಿಸಿರುತ್ತದೆ. ಮುಂದೆ ಕಾಯಿದೆ ರೂಪಿತಗೊಂಡು ಜಾರಿಗೆ ಬರುವ ಸಮಯದಲ್ಲಿ ಅಥವಾ ಅನುಷ್ಠಾನಕ್ಕೆ ಬರುವ ಸಮಯದಲ್ಲಿ ನಾನಾ ಬಗೆಯ ಸವಾಲುಗಳನ್ನು ಎದುರಿಸಬೇಕಾಗುತ್ತದೆ. ಹಾಗಾಗಿ ಇಂದು ಮಹಿಳಾ ಪರವಾದ ಕಾನೂನುಗಳು ಜಾರಿಗೆ ಬರುವುದು ಅಷ್ಟು ಸುಲಭದ ಮಾತಲ್ಲ. ಈ ನಿಟ್ಟಿನಲ್ಲಿ ಕೌಟುಂಬಿಕ ಹಿಂಸೆಯಿಂದ ಮಹಿಳೆಯರನ್ನು ತಪ್ಪಿಸಲು ೨೦೦೫ರಲ್ಲಿ ಜಾರಿಗೆ ಬಂದ ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ಸಂರಕ್ಷಣಾ ಕಾಯಿದೆ ಅನುಷ್ಠಾನದಲ್ಲಿ ಬರಲು ಹಲವಾರು ಸವಾಲುಗಳನ್ನು ಎದುರಿಸಿರುವುದು ಮತ್ತು ಬದಲಿಸುತ್ತಿರುವುದು ಕಂಡುಬರುತ್ತಿದೆ. ಈ ಸವಾಲುಗಳನ್ನು ಪರಿಹರಿಸಿಕೊಳ್ಳಲು ಯಾವ ಯಾವ ಸಾಧ್ಯತೆಗಳನ್ನು ಕಂಡುಕೊಳ್ಳಬಹುದು ಎಂಬುದನ್ನು ತಿಳಿಯಬೇಕಾಗಿದೆ.

೧. ಕಾಯಿದೆಯ ಅನುಷ್ಠಾನದಲ್ಲಿನ ಸವಾಲುಗಳು

**ಧಾರ್ಮಿಕ, ಸಾಮಾಜಿಕ ಮೌಲ್ಯಗಳು ಬಲಿಷ್ಟವಾಗಿರುವುದು**

ವ್ಯವಸ್ಥೆಯಲ್ಲಿನ ಎಲ್ಲಾ ಮೌಲ್ಯಗಳು ಧರ್ಮದ ಹಿಡಿತದಲ್ಲಿರುವುದು ಕಂಡುಬರುತ್ತದೆ. ಧರ್ಮದ ಮೌಲ್ಯಗಳ ನಿರ್ದೇಶನದಂತೆ ಸ್ತ್ರೀಪುರುಷರು ಅನೇಕ ಸಂಸ್ಥೆಗಳನ್ನು ನಿರ್ಮಿಸಿಕೊಂಡು ವಾಹಕಗಳಂತೆ ಕಾರ್ಯನಿರ್ವಹಿಸುತ್ತಿದ್ದಾರೆ. ಇಲ್ಲಿ ಮುಖ್ಯವಾಗಿ ಧರ್ಮವನ್ನು ಸ್ಥಾಪಿಸಿದವರು ಯಾರು? ಈ ಧರ್ಮದ ಮೌಲ್ಯಗಳನ್ನು ಯಾರು ರೂಪಿಸಿದರು? ಅವುಗಳ ಹಿಂದಿನ ರಾಜಕಾರಣ ಏನು? ಎಂಬುದನ್ನು ಮೊದಲು ಅರಿಯಬೇಕು. ನಂತರ ಈ ಧರ್ಮದ ಮೌಲ್ಯಗಳು ಮಹಿಳಾ ಪರ ಕಾನೂನುಗಳು ಅನುಷ್ಠಾನಕ್ಕೆ ಬರಲು ಹೇಗೆ ಅಡೆ ತಡೆಯನ್ನು ಅಥವಾ ಸವಾಲುಗಳನ್ನು ಒಡ್ಡುತ್ತವೆ ಎಂಬುದು ತಿಳಿಯಬೇಕಾಗುತ್ತದೆ. ಭಾರತ ದೇಶವು ವಿವಿಧ ಧರ್ಮಗಳ ತವರೂರಾಗಿದೆ. ಈ ಧರ್ಮಗಳನ್ನು ನಾವು ಸೂಕ್ಷ್ಮವಾಗಿ ಅವಲೋಕಿಸಿದಾಗ ಈ ಧರ್ಮಗಳ ಸಂಸ್ಥಾಪಕರು ಯಾರಾಗಿರುತ್ತಾರೆಂದರೆ ಅವರು ಪುರುಷರೇ ಆಗಿರುವುದು ಬೆಳಕಿಗೆ ಬರುತ್ತದೆ. ಈ ಧಾರ್ಮಿಕ ಮೌಲ್ಯಗಳೆಲವೂ ಸಹ ಅವನ ಮೂಗಿನ ನೇರಕ್ಕೇ ರೂಪಿಸಲ್ಪಟ್ಟಿರುತ್ತವೆ. ಹಾಗಾಗಿ ವ್ಯವಸ್ಥೆಯಲ್ಲಿ ಪ್ರಧಾನ ಮತ್ತು ಅಧೀನ ನೆಲೆಗಳನ್ನು ಹುಟ್ಟು ಹಾಕಲ್ಪಟ್ಟಿರುವುದು ಕಂಡುಬರುತ್ತದೆ. ಪ್ರಧಾನ ನೆಲೆಯಲ್ಲಿ ಪುರುಷರು ಇರಬೇಕು ಮತ್ತು ಅದೀನ ನೆಲೆಯಲ್ಲಿ ಮಹಿಳೆಯರು ಇರಬೇಕು ಎಂಬುದು ಅದರ ಹಿಂದಿನ ರಾಜಕಾರಣ. ಪುರುಷನಿಗೆ ಪೂರಕವಾಗುವಂತಹ ಧಾರ್ಮಿಕ ಮೌಲ್ಯಗಳನ್ನು ರೂಪಿಸಲಾಯಿತು. ಅನೇಕ ದೇವರುಗಳನ್ನು ಸೃಷ್ಟಿಸಲಾಯಿತು. ಧರ್ಮ ಗ್ರಂಥಗಳನ್ನು ಸೃಷ್ಟಿಸಿ ಅವುಗಳೇ ಪವಿತ್ರ ಗ್ರಂಥಗಳು ಎಂಬುದಾಗಿ ಜನರನ್ನು ನಂಬಿಸಲಾಯಿತು. ಇದಕ್ಕೆ ಪೂರಕವಾಗಿರುವಂತೆ ಸಮಾಜವನ್ನು ರಚಿಸಲಾಯಿತು. ಈ ಸಮಾಜದಲ್ಲಿ ಹಲವಾರು ಸಂಸ್ಥೆಗಳನ್ನೂ ಸಹ ನಿರ್ಮಿಸಿ ಹಲವಾರು ಸಂಪ್ರದಾಯ, ಆಚರಣೆ, ಪದ್ದತಿಗಳನ್ನು ರೂಪಿಸಲಾಯಿತು. ಸಾಮಾಜಿಕ ಸಂಸ್ಥೆಗಳಲ್ಲಿ ಕುಟುಂಬವೂ ಒಂದು. ಈ ಕುಟುಂಬದ ರಚನೆ ಅಪಾರವಾದ ವೈವಿಧ್ಯಗಳಿಂದ ಕೂಡಿದುದಾಗಿದೆ. ಕುಟುಂಬದ ವ್ಯಾಪ್ತಿಯೊಳಗೆ ಬರುವ ಪ್ರಮುಖ ವಿಚಾರಗಳೆಂದರೆ ಕುಟುಂಬದ ಗಾತ್ರ, ಕುಟುಂಬದ ಯಜಮಾನಿಕೆ, ಆರ್ಥಿಕ ಮತ್ತು ಸಾಮಾಜಿಕ ವ್ಯವಹಾರಗಳು, ಮಹಿಳೆಯರ ಸ್ಥಾನ, ವಿವಾಹ ಪದ್ದತಿ ಮುಂತಾದವು. ವ್ಯವಸ್ಥೆಯಲ್ಲಿ ಪುರುಷಶಾಹಿ ಮೌಲ್ಯಗಳು ಶಾಶ್ವತವಾಗಿ ನೆಲೆಯೂರಲು ಮತ್ತು ಅವು ಮುಂದುವರೆದುಕೊಂಡು ಹೋಗಲು ಕುಟುಂಬವು ಒಂದು ವಾಹಕದಂತೆ ಕೆಲಸ ನಿರ್ವಹಿಸುತ್ತಾ ಬಂದಿದೆ. ಈ ಕುಟುಂಬ ಮೌಲ್ಯಗಳಲ್ಲಿ ಮಹಿಳೆಗೆ ಯಾವುದೇ ರೀತಿಯ ಸ್ವಾತಂತ್ರ್ಯವೆಂಬುದು ಕಂಡುಬರುವುದಿಲ್ಲ. ಹಕ್ಕುಗಳೆಲ್ಲವೂ ಕೂಡ ಪುರುಷನದ್ದಾಗಿದ್ದರೆ, ಬಾಧ್ಯತೆಗಳು ಮಾತ್ರ ಮಹಿಳೆಯದ್ದಾಗಿರುತ್ತವೆ. ಪುರುಷ ಹೇಗಿರಬೇಕು ಮತ್ತು ಮಹಿಳೆ ಹೇಗಿರಬೇಕು ಎಂಬುದನ್ನು ನಮ್ಮ ಧರ್ಮ ಗ್ರಂಥಗಳು ಅತ್ಯಂತ ಸ್ಪಷ್ಟವಾಗಿ ಸೂಚಿಸುತ್ತವೆ. ಇವುಗಳಿಗೆ ಮನುವಿನ ಶಾಸ್ತ್ರಗಳು ಪೂರಕವಾಗಿ ನಿಲ್ಲುತ್ತವೆ. ಈ ಧರ್ಮದ ಮೌಲ್ಯಗಳು ಯಾವುದೇ ಒಂದು ಕಾನೂನು ಅನುಷ್ಠಾನಕ್ಕೆ ಬರಲು ಹೇಗೆ ಅಡತಡೆಯನ್ನು ಒಡ್ಡುತ್ತವೆ ಎಂಬುದಕ್ಕೆ ಒಂದು ಉತ್ತಮ ಉದಾಹರಣೆ ಎಂದರೆ ೧೯ನೇ ಶತಮಾನದಲ್ಲಿ ಸತೀ ಪದ್ಧತಿಯ ವಿರುದ್ಧ ಹೋರಾಡಿದ ರಾಜಾರಾಮ್ ಮೋಹನ್‌ರಾಯ್ ಮತ್ತು ಇತರರು

ಎದುರಿಸಿದಂತಹ ಸವಾಲುಗಳನ್ನು ಗಮನಿಸಬೇಕಾಗುತ್ತದೆ. ಅಂದಿನ ಸಂದರ್ಭದಲ್ಲಿ ಸತಿ ಆಚರಣೆಯು ಹಿಂದೂ ಧರ್ಮದಲ್ಲಿ ಒಂದು ಪದ್ಧತಿಯಾಗಿ ಆಚರಣೆಯಲ್ಲಿತ್ತು. ಗಂಡ ಸತ್ತನಂತರ ಹೆಂಡತಿಯೂ ಕೂಡ ಗಂಡನ ಚಿತೆಯಲ್ಲಿ ಹಾರಿ ತನ್ನ ಪ್ರಾಣವನ್ನು ಅರ್ಪಿಸಬೇಕಾಗಿತ್ತು. ಇದಕ್ಕೆ ಒಪ್ಪದಿದ್ದರೆ ಮಹಿಳೆಯನ್ನು ಒತ್ತಾಯಪೂರ್ವಕವಾಗಿ ಉರಿಯುವ ಚಿತೆಯಲ್ಲಿ ನೂಕುತ್ತಿದ್ದರು. ಕೆಲವು ಸಂದರ್ಭದಲ್ಲಿ ಇವುಗಳನ್ನು ದಿಕ್ಕರಿಸಿ ಸತಿ ಪದ್ಧತಿಯನ್ನು ಆಚರಿಸದೇ ಇದ್ದ ಮಹಿಳೆಗೆ ಹಲವು ಕಠಿಣ ಶಿಕ್ಷೆಯನ್ನು ವಿಧಿಸಲಾಗುತ್ತಿತ್ತು. ಈ ಅಮಾನುಷ ಪದ್ಧತಿಗೆ ಎಷ್ಟೋ ವಿಧವೆಯರು ಮತ್ತು ಬಾಲ ವಿಧವೆಯರು ಬಲಿಯಾಗುತ್ತಿದ್ದರು. ಇಂತಹ ಅಮಾನುಷ ಪದ್ಧತಿಯನ್ನು ತೊಡೆದುಹಾಕಲು ರಾಜಾರಾಮ್ ಮೋಹನ್‌ರಾಯ್ ಅವರು ಒಂದು ವರದಿಯನ್ನು ಬ್ರಿಟಿಷ್ ಸರಕಾರಕ್ಕೆ ಸಲ್ಲಿಸಿದರು. ಈ ಪದ್ದತಿಯು ಮಹಿಳೆಯರನ್ನು ಅಮಾನುಷವಾಗಿ ಕೊಲ್ಲುತ್ತದೆ. ಇದನ್ನು ತೊಡೆದು ಹಾಕಲು ಒಂದು ಕಾನೂನನ್ನು ಜಾರಿಗೆ ತರಬೇಕು ಎಂದು ಒತ್ತಾಯಿಸಿದರು. ಇದಕ್ಕೆ ಅನುಗುಣವಾಗಿ ಬ್ರಿಟಿಷ್ ಸರಕಾರ ಒಂದು ಕಾನೂನನ್ನು ಜಾರಿಗೆ ತಂದಿತು. ಅದೇ ಸತೀ ಪದ್ಧತಿ ನಿಷೇಧ ಕಾಯ್ದೆ. ಆದರೆ ಇದರ ಅನುಷ್ಠಾನದ ಸಂದರ್ಭದಲ್ಲಿ ಸಂಪ್ರದಾಯವಾದಿಗಳು ಬಹಳಷ್ಟು ಪ್ರತಿರೋಧವನ್ನು ವ್ಯಕ್ತಪಡಿಸಿದರು. ಈ ಕಾಯ್ದೆಯ ವಿರುದ್ಧ ಒಂದು ವರದಿಯನ್ನು ತಯಾರಿಸಿ ಬ್ರಿಟಿಷ್ ಸರಕಾರಕ್ಕೆ ಸಲ್ಲಿಸಿದರು. ಈ ಪದ್ಧತಿಯು ಹಿಂದೂ ಧರ್ಮ ಶಾಸ್ತ್ರದಲ್ಲಿ ತಿಳಿಸಿರುವಂತೆ ನಡೆಯುತ್ತಿದೆ. ಇದರ ನಿಷೇಧದಿಂದ ಹಿಂದೂ ಧರ್ಮಕ್ಕೆ ಅವಮಾನ ಮಾಡಿದಂತೆ. ಹಾಗಾಗಿ ಈ ಕಾಯ್ದೆಯನ್ನು ಜಾರಿಗೆ ತರಬಾರದು ಎಂದು ಒತ್ತಾಯಿಸಿದರು. ರಾಜಾರಾಮ್ ಮೋಹನ್‌ರಾಯರ ಮೇಲೆ ಮರಣಾಂತಿಕ ಹಲ್ಲೆಗಳೂ ಕೂಡ ಜರುಗಿದವು ಆದರೆ ಇದೆಲ್ಲವನ್ನೂ ಲೆಕ್ಕಿಸದೆ ಬ್ರಿಟಿಷ್ ಸರಕಾರ ಈ ಕಾಯಿದೆಯನ್ನು ಜಾರಿಗೆ ತಂದಿತು. ಈ ಕಾಯ್ದೆ ಜಾರಿಗೆ ಬಂದರೂ ಸಹ ಸತೀ ಪದ್ಧತಿಯು ಸಂಪೂರ್ಣವಾಗಿ ನಾಶವಾಗಲಿಲ್ಲ. ಸ್ವಾತಂತ್ರ್ಯ ನಂತರವೂ ಸಹ ಈ ಪದ್ಧತಿ ಜಾರಿಯಲ್ಲಿದ್ದುದು ಮತ್ತೇ ಇದಕ್ಕೆ ಮಹಿಳೆಯರು ಬಲಿಯಾಗಿರುವ ಪ್ರಸಂಗಗಳು ನಡೆದಿರುವುದು ಕಂಡುಬರುತ್ತದೆ. ಇಲ್ಲಿ ಮುಖ್ಯವಾಗಿ ನಮ್ಮ ಧಾರ್ಮಿಕ ಮೌಲ್ಯಗಳು ಮಹಿಳಾ ಪರವಾದ ಕಾನೂನುಗಳು ಜಾರಿಗೊಳ್ಳುವಲ್ಲಿ ಯಾವ ರೀತಿ ತಡೆಯನ್ನು ಒಡ್ಡುತ್ತವೆ ಎಂಬುದನ್ನು ತಿಳಿಯಬಹುದಾಗಿದೆ. ಸ್ವಾತಂತ್ರ್ಯ ನಂತರವೂ ಸಹ ಈ ಪದ್ಧತಿ ಆಚರಣೆಯಲ್ಲಿತ್ತು ಎಂಬುದು ಧಾರ್ಮಿಕ ಮೌಲ್ಯಗಳು ಎಷ್ಟು ಬಲಿಷ್ಟವಾಗಿವೆ ಎಂಬುದು ತಿಳಿಮು ಬರುತ್ತದೆ. ಹಾಗೆಯೇ ದೇವದಾಸಿ ಪದ್ಧತಿ ನಿಷೇಧ ಕಾಯ್ದೆ, ಬಾಲ್ಯ ವಿವಾಹ ನಿಷೇಧ ಕಾಯ್ದೆ, ವರದಕ್ಷಿಣೆ ನಿಷೇಧ ಕಾಯ್ದೆ ಹೀಗೆ ಎಲ್ಲಾ ಕಾನೂನುಗಳೂ ಜಾರಿಯಲ್ಲಿದ್ದರೂ ಸಹ ಇವುಗಳು ಸಂಪೂರ್ಣವಾಗಿ ಅನುಷ್ಠಾನದಲ್ಲಿವೆಯೇ ಎಂದು ನೋಡಿದರೆ ಉತ್ತರ ಇಲ್ಲ. ಏಕೆಂದರೆ ಇಂದಿಗೂ ಸಹ ವರದಕ್ಷಿಣೆಗೆ ಸಂಬಂಧಿಸಿದ ಅನೇಕ ಹತ್ಯೆಗಳು, ಬಾಲ್ಯವಿವಾಹಗಳು ಹೀಗೆ ಅನೇಕ ಘಟನೆಗಳು ನಡೆಯುತ್ತಲೇ ಇವೆ. ಹಾಗಾಗಿ ಈ ಧಾರ್ಮಿಕ ಮೌಲ್ಯಗಳನ್ನು ಈ ಕಾಯ್ದೆಗಳು ಸಮರ್ಥವಾಗಿ ಎದುರಿಸುವಲ್ಲಿ ವಿಫಲವಾಗಿವೆ ಎಂದು ಹೇಳಬಹುದು.

ಈ ನಿಟ್ಟಿನಲ್ಲಿ ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ಸಂರಕ್ಷಣಾ ಅದಿನಿಯಮವು ಅನುಷ್ಠಾನಕ್ಕೆ ಬರಲು ಈ ಧರ್ಮದ ಮೌಲ್ಯಗಳು ಬಹು ದೊಡ್ಡ ಸವಾಲಾಗಿ ಪರಿಣಮಿಸಿದೆ. ಪುರುಷಶಾಹಿ ಮೌಲ್ಯಗಳ

ಒಂದು ವಾಹಕದಂತೆ ಕೆಲಸ ನಿರ್ವಹಿಸುವ ಕುಟುಂಬವು ಈ ಕಾಯಿದೆಯನ್ನು ಜಾರಿಗೆ ಬರಲು ಅನುವುಮಾಡಿಕೊಡುತ್ತಿಲ್ಲ. ಮುಖ್ಯವಾಗಿ ಕುಟುಂಬದಲ್ಲಿಯ ಮಹಿಳೆಯನ್ನು ಸಂಸ್ಕೃತಿಯ ಪ್ರತೀಕದಂತೆ ಬಿಂಬಿಸಲಾಗುತ್ತಿದೆ. ಮತ್ತು ಇಂದು ಸಂಸ್ಕೃತಿ ಎಂದರೆ ಮಹಿಳೆ, ಮಹಿಳೆಯೆಂದರೆ ಸಂಸ್ಕೃತಿ ಎಂಬಂತಾಗಿದೆ. ಹಾಗಾಗಿ ಇದನ್ನು ಕಾಪಾಡುವ ಜವಾಬ್ದಾರಿ ಮಹಿಳೆಗೆ ಮಾತ್ರ ಇರುವುದು ಎಂದು ಅವಳನ್ನು ಅತಿಶಯೋಕ್ತಿಗೆ ಒಳಪಡಿಸಲಾಗುತ್ತದೆ. ಇನ್ನು ಈ ಧಾರ್ಮಿಕ ಮೌಲ್ಯಗಳು ಎಷ್ಟು ಬಲಿಷ್ಠವಾಗಿವೆ ಎಂದರೆ ಮಹಿಳೆ ಅವಳಿಗೆ ತಿಳಿಯದಂತೆಯೇ ಈ ಮೌಲ್ಯಗಳನ್ನು ಅನುಸರಿಸುತ್ತಿರುವುದು ಮತ್ತು ಮುಂದಿನ ಪೀಳಿಗೆಗೆ ಮುಂದುವರೆಸುತ್ತಿರುವುದು ಕಂಡುಬರುತ್ತದೆ. ಮದುವೆಯಾದ ಮಹಿಳೆಗೆ ಮೊದಲು, ಹುಟ್ಟಿದ ಮನೆಗೆ ಮತ್ತು ಕೊಟ್ಟ ಮನೆಗೆ ಕೀರ್ತಿ ತರುವಂತವಳಾಗು, ಇಡೀ ಕುಟುಂಬದ ಗೌರವನ್ನು ಕಾಪಾಡುವುದು ನಿನ್ನ ಕರ್ತವ್ಯ, ಸೀತೆಯಂತೆ ಜೀವನವನ್ನು ಸಾಗಿಸು ಹೀಗೆ ಹಲವಾರು ಮಾತುಗಳಿಂದ ಒಂದು ದೊಡ್ಡ ಜವಾಬ್ದಾರಿಯನ್ನು ಹೊರಿಸಲಾಗುತ್ತದೆ. ಹಾಗಾಗಿ ಅವಳು ಆ ಸಿದ್ಧಾಂತಗಳಿಗೆ ತಕ್ಕಂತೆ ತನ್ನ ಜೀವನದ ಮೌಲ್ಯಗಳನ್ನು ರೂಪಿಸಿಕೊಳ್ಳುತ್ತಾಳೆ. ಮಹಿಳೆ 'ಪತಿಯೇ ಪರ ದೈವ' ಎಂದು ಗಂಡನನ್ನು ಕಾಣುತ್ತಾಳೆ. ಇದರಿಂದಾಗಿಯೇ ಪತಿ ಏನೂ ಮಾಡಿದರೂ ಸಹ ಸುಧಾರಿಸಿಕೊಂಡು ಹೋಗು'ವ ಮನೋಭಾವನೆಯನ್ನು ಬೆಳೆಸಿಕೊಂಡುಬಿಟ್ಟಿದ್ದಾಳೆ. ಇವುಗಳಿಗೆ ಕಾರಣ ನಮ್ಮ ಧಾರ್ಮಿಕ ಮೌಲ್ಯಗಳು. ಈ ಧಾರ್ಮಿಕ ಮೌಲ್ಯಗಳ ಅಡಿಯಲ್ಲಿ ಸಿಲುಕಿಕೊಂಡಿರುವ ಮಹಿಳೆ ಮಹಿಳಾ ಪರವಾದ ಕಾನೂನುಗಳ ಬಗ್ಗೆ ಯೋಚಿಸುತ್ತಿಲ್ಲ. ಹಾಗಾಗಿ ಈ ಕೌಟುಂಬಿಕ ದೌರ್ಜನ್ಯ ತಡೆ ಕಾಯ್ದೆಯ ಅನುಷ್ಠಾನದಲ್ಲಿ ಈ ಧಾರ್ಮಿಕ ಮೌಲ್ಯಗಳು ದೊಡ್ಡ ಸವಾಲಾಗಿ ಪರಿಣಮಿಸಿದೆ ಎಂಬುದು ವೇದ್ಯವಾಗುತ್ತದೆ.

**ಸ್ಥಳೀಯ ಮಹಿಳಾ ಸಂಘಟನೆಗಳಿಗೆ ಈ ಕಾಯಿದೆಯ ಬಗ್ಗೆ ಅರಿವು ಇಲ್ಲದೇ ಇರುವುದು**

ಸ್ಥಳೀಯವಾಗಿ ಹಲವಾರು ಮಹಿಳಾ ಸಂಘಟನೆಗಳು, ಸಂಘ ಸಂಸ್ಥೆಗಳು, ಇರುವುದನ್ನು ನಾವು ಕಾಣುತ್ತೇವೆ. ಇವುಗಳು ಮಹಿಳಾ ಪರವಾದ ಯಾವುದೇ ಕಾನೂನುಗಳ ಬಗ್ಗೆ ಅರಿವು ಇಲ್ಲದೇ ಇರುವುದನ್ನು ಸಹ ನಾವು ಕಾಣುತ್ತೇವೆ. ಹಾಗಾಗಿ ಈ ಸಂಘಟನೆಗಳು ಮುಖ್ಯವಾಗಿ ಕುಟುಂಬದಲ್ಲಿ ಮಹಿಳೆಯರು ಅನುಭವಿಸುವ ಹಿಂಸೆಗಳನ್ನು ಗುರುತಿಸಿ ಇವುಗಳ ವಿರುದ್ಧ ಹೋರಾಟ ನಡೆಸಬೇಕಾಗುತ್ತದೆ. ಆದರೆ ಈ ತರಹದ ಕಾರ್ಯಗಳು ನಡೆಯುತ್ತಿಲ್ಲ. ಬದಲಾಗಿ ಕೇವಲ ಹಣದ ಬ್ಯಾಂಕುಗಳಾಗಿ ರೂಪುಗೊಳ್ಳುತ್ತಿರುವುದನ್ನು ಕಾಣಲಾಗುತ್ತದೆ. ಈ ಸಂಘಟನೆಗಳು ಈ ಕಾಯಿದೆಯ ಬಗ್ಗೆ ತಿಳಿದುಕೊಳ್ಳಬೇಕು ಎಂಬಂತಹ ಮನಃಸ್ಥಿತಿಯನ್ನು ಸಹ ಹೊಂದಿಲ್ಲದಿರುವುದು ಕಂಡುಬರುತ್ತದೆ. ಹಾಗಾಗಿ ಇದೂ ಕೂಡ ಈ ಕಾಯಿದೆಯ ಅನುಷ್ಠಾನಕ್ಕೆ ಒಂದು ದೊಡ್ಡ ಸವಾಲಾಗಿದೆ ಎಂದು ಹೇಳಬಹುದು.

**ಪುರುಷ ವಿರೋಧಿ ಕಾನೂನು ಎಂದು ಬಿಂಬಿಸಲಾಗುತ್ತಿದೆ**

ಈ ಕುಟುಂಬದಲ್ಲಿ ಮಹಿಳೆಗಿಂತ ಹೆಚ್ಚಾಗಿ ಪುರುಷರೇ ಹಿಂಸೆಯನ್ನು ಅನುಭವಿಸುತ್ತಾರೆ ಎಂಬುದು ಕೆಲವರ ವಾದವಾಗಿರುತ್ತದೆ. ಈ ಹಿಂಸೆಗೆ ಮಹಿಳೆಯೇ ಕಾರಣ ಎಂಬುದನ್ನು ಸಹ ತಿಳಿಸಿಕೊಡಲಾಗುತ್ತದೆ.

ಹಾಗಾಗಿ ಈ ಕಾಯಿದೆಯು ಕೇವಲ ಮಹಿಳೆಯರನ್ನು ಒಳಗೊಂಡಿರುವುದರಿಂದ ಇದು ಪುರುಷ ವಿರೋಧಿ ಕಾನೂನು ಎಂದು ಬಿಂಬಿಸಲಾಗುತ್ತಿದೆ. ಹೀಗೆ ಹೇಳುವವರು ಅಲ್ಲೊಂದು ಇಲ್ಲೊಂದು ಒಂದೆರಡೆ ಉದಾಹರಣೆಗಳನ್ನು ಗಮನದಲ್ಲಿಟ್ಟುಕೊಂಡು ಹೇಳುತ್ತಿರುತ್ತಾರೆ. ಹೀಗೆ ಹೇಳುವುದರ ಹಿಂದಿನ ಉದ್ದೇಶ ಬೇರೆಯದೇ ಆಗಿರುತ್ತದೆ. ಆದರೆ ವಾಸ್ತವದಲ್ಲಿ ಪುರುಷರಿಗಿಂತ ಮಹಿಳೆಯರೇ ಹೆಚ್ಚಿನ ಹಿಂಸೆಯನ್ನು ಅನುಭವಿಸುತ್ತಿದ್ದಾರೆ. ಸಂಪ್ರದಾಯವಾದಿಗಳು ಈ ರೀತಿಯ ಹೇಳಿಕೆಗಳನ್ನು ನೀಡುವುದರ ಮೂಲಕ ಈ ಕಾಯಿದೆಯು ಅನುಷ್ಠಾನಕ್ಕೆ ದೊಡ್ಡ ಸವಾಲಾಗಿ ಕಾಡುತ್ತಾರೆ. ಆದರೆ ಈ ಕಾಯಿದೆ ಪುರುಷ ಮೌಲ್ಯಗಳ ವಿರೋಧಿಯೇ ಹೊರತು ಪುರುಷರ ವಿರೋಧಿಯಲ್ಲ ಎಂಬುದನ್ನು ಅರಿಯಬೇಕಾಗಿದೆ.

**ಕಾನೂನು ನಿರ್ವಹಣಾಗಾರರೆಲ್ಲರೂ ಪುರುಷಶಾಹಿ ಮೌಲ್ಯಗಳಿಂದ ಮುಕ್ತರಾಗದೇ ಇರುವುದು**

ಈ ಕಾಯಿದೆಯ ನಿರ್ವಹಣಾಗಾರರು ನಿಷ್ಪಕ್ಷಪಾತವಾಗಿ ಕಾರ್ಯನಿರ್ವಹಿಸಬೇಕಾಗಿರುವುದು ಅವರ ಕರ್ತವ್ಯವಾಗಿರುತ್ತದೆ. ಆದರೆ ಈ ಕಾಯಿದೆಯು ಸಂಪೂರ್ಣವಾಗಿ ಪುರುಷಶಾಹಿ ಮೌಲ್ಯಗಳಿಗೆ ವಿರೋಧಿಯಾಗಿರುವುದರಿಂದ ಇಲ್ಲಿ ತಾರತಮ್ಯ ಏರ್ಪಡುವುದು ಕಂಡುಬರುತ್ತದೆ. ಈ ಕಾಯಿದೆಯ ನಿರ್ವಹಣಾಗಾರರಾಗಿ ಪುರುಷರು ನೇಮಕಗೊಂಡಿದ್ದರೆ ಈ ಕಾಯಿದೆಯ ಅನುಷ್ಠಾನದಲ್ಲಿ ಅವರು ಯಾವುದೇ ರೀತಿಯ ಪ್ರಮುಖ ಪಾತ್ರವನ್ನು ವಹಿಸದೇ ಇರುವುದನ್ನು ನಾವು ಕಾಣುತ್ತೇವೆ. ಒಂದು ವೇಳೆ ಅನುಷ್ಠಾನದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದರೂ ಸಹ ಅದು ಮೇಲ್ನೋಟಕ್ಕೆ ಮಾತ್ರ. ಉಳಿದಂತೆ ಅವರ ಮನಸ್ಸಿನ ಅಂತರ್ಯದಲ್ಲಿ ಈ ಕಾಯಿದೆಯ ವಿರುದ್ಧದ ಮನೋಭಾವನೆಗಳು ತುಂಬಿಕೊಂಡಿರುತ್ತದೆ. ಏಕೆಂದರೆ ಪುರುಷಶಾಹಿ ಮೌಲ್ಯಗಳು ಅವರನ್ನು ಈ ರೀತಿ ನಡೆದುಕೊಳ್ಳುವಂತೆ ನಿರ್ದೇಶಿಸುತ್ತಿರುತ್ತವೆ. ಹಾಗಾಗಿ ಈ ಕಾಯಿದೆಯ ನಿರ್ವಹಣಾಗಾರರು ಸಹ ಈ ಪುರುಷಶಾಹಿ ಮೌಲ್ಯಗಳಿಂದ ಮುಕ್ತರಾಗದೇ ಇರುವುದು ಕೂಡ ಈ ಕಾಯಿದೆಯ ಅನುಷ್ಠಾನಕ್ಕೆ ಸವಾಲಾಗಿ ಪರಿಣಮಿಸಿದೆ ಎಂದು ಹೇಳಬಹುದು.

**ಪೋಲೀಸರು ಮತ್ತು ಪೋಲೀಸ್ ಠಾಣೆಯ ಬಗ್ಗೆ ಜನರಲ್ಲಿ ಇರುವಂತಹ ತಪ್ಪು ಗ್ರಹಿಕೆಗಳು**

ಸಮಾಜದ ಪ್ರತಿಯೊಬ್ಬ ಪ್ರಜೆಗೂ ಕೂಡ ಪೋಲೀಸರೆಂದರೆ ಅಥವಾ ಪೋಲೀಸ್ ಠಾಣೆ ಎಂದರೆ ಒಂದು ರೀತಿಯ ಭಯ ಉಂಟಾಗುತ್ತದೆ. ಆದರೆ ಪ್ರಜೆಗಳ ಮತ್ತು ಕಾನೂನುಗಳ ರಕ್ಷಣೆಗೆಂದೇ ಹುಟ್ಟಿಕೊಂಡಿರುವ ಈ ಪೋಲೀಸ್ ವ್ಯವಸ್ಥೆಯ ಬಗ್ಗೆ ಜನರಲ್ಲಿ ನಂಬಿಕೆಯೇ ಇಲ್ಲದಾಗಿದೆ. ಪೋಲೀಸ್ ಠಾಣೆಗೆ ಹೋದರೆ ನಮಗೆ ಯಾವುದೇ ನ್ಯಾಯ ಸಿಗುವುದಿಲ್ಲ ಎಂಬುದು ಪ್ರಜೆಗಳ ಅಭಿಪ್ರಾಯವಾಗಿದೆ. ಕುಟುಂಬದಲ್ಲಿ ಹಿಂಸೆಯನ್ನು ಅನುಭವಿಸಿದ ಮಹಿಳೆ ಪೋಲೀಸ್ ಠಾಣೆಗೆ ಹೋಗಿ ಕಂಪ್ಲೈಂಟ್ ಕೊಡಬೇಕಾಗುತ್ತದೆ. ಆದರೆ ವಾಸ್ತವದಲ್ಲಿ ಮಹಿಳೆ ಪೋಲೀಸ್ ಠಾಣೆಯ ಮೆಟ್ಟಿಲುಗಳನ್ನು ಸಹ ಹತ್ತಬಾರದು ಎಂದು ಒಂದು ನಿಯಮವನ್ನು ರೂಪಿಸಿಕೊಂಡಿರುವುದರಿಂದ ಮತ್ತು ಪೋಲೀಸ್ ಠಾಣೆಗೆ ಹೋದರೂ ಸಹ ಅವಳಿಗೆ ನ್ಯಾಯಸಿಗುತ್ತದೆ ಎಂಬ ನಂಬಿಕೆ ಅವಳಲ್ಲಿ ಇಲ್ಲದಿರುವುದರಿಂದ ಅವಳು ಊರಿನ ಹಿರಿಯರ ಸಮ್ಮುಖದಲ್ಲಿಯೇ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲಾಗುತ್ತದೆ. ಮುಖ್ಯವಾಗಿ ಈ

ಪೋಲೀಸರೂ ಸಹ ಈ ಕೌಟುಂಬಿಕ ಕಾಯಿದೆಯ ಬಗ್ಗೆ ಸಂಪೂರ್ಣವಾದ ಅರಿವನ್ನು ಹೊಂದಿದ್ದರೆ ಮತ್ತೆ ಇಲ್ಲಿ ಬರುವಂತಹ ಕೇಸ್‌ಗಳಿಗೆ ಸರಿಯಾದ ರೀತಿಯಲ್ಲಿ ನ್ಯಾಯವನ್ನು ಒದಗಿಸಿದ್ದೇ ಆದಲ್ಲಿ ಈ ಪೋಲೀಸ್ ವ್ಯವಸ್ಥೆಯ ಬಗ್ಗೆ ಜನರಲ್ಲಿ ಅದರಲ್ಲಿಯೂ ಮಹಿಳೆಯರಿಗೆ ಒಂದು ನಂಬಿಕೆ ಬರುತ್ತದೆ. ಆದರೆ ವಾಸ್ತವದಲ್ಲಿ ರಕ್ಷಕರೇ ಭಕ್ಷಕರಾಗಿ ವರ್ತಿಸುತ್ತಿರುವುದರಿಂದ ಪೋಲೀಸ್ ವ್ಯವಸ್ಥೆಯ ಬಗ್ಗೆ ಜನರಲ್ಲಿ ಭಯದ ವಾತಾವರಣ ಸೃಷ್ಟಿಯಾಗಿದೆ. ಹಾಗಾಗಿ ಇದೂ ಸಹ ಈ ಕಾಯಿದೆಯ ಅನುಷ್ಠಾನಕ್ಕೆ ಒಂದು ದೊಡ್ಡ ಸವಾಲಾಗಿ ಪರಿಣಮಿಸಿದೆ ಎಂದು ಹೇಳಬಹುದು.

**ಜನರಲ್ಲಿ ಶಿಕ್ಷಣದ ಕೊರತೆ**

ಶಿಕ್ಷಣದ ಕೊರತೆಯು ಸಹ ಈ ಕಾಯಿದೆಯ ಅನುಷ್ಠಾನಕ್ಕೆ ತೊಡಕಾಗಿರುವುದು ಕಂಡುಬರುತ್ತದೆ. ಇಂದು ಗ್ರಾಮೀಣ ಭಾಗದಲ್ಲಿನ ಮಹಿಳೆಯರು ಯಾವುದೇ ರೀತಿಯ ಶಿಕ್ಷಣವನ್ನು ಪಡೆಯದೇ ಅನಕ್ಷರಸ್ಥರಾಗಿಯೇ ಇರುವುದನ್ನು ನಾವು ಕಾಣುತ್ತೇವೆ. ಹಾಗಾಗಿ ಈ ಕಾಯಿದೆಯ ಬಗ್ಗೆ ಅವರಿಗೆ ಸಂಪೂರ್ಣವಾಗಿ ತಿಳಿಸಿಕೊಡುವುದೂ ಒಂದು ದೊಡ್ಡ ಸಾಹಸವೇ ಸರಿ. ಇದರಿಂದಾಗಿ ಮಹಿಳೆಯರು ಹೆಚ್ಚು ಹೆಚ್ಚು ಮೂಢನಂಬಿಕೆಗಳಿಗೆ ಬಲಿಯಾಗುತ್ತಿರುವುದರಿಂದ ಇದೊಂದು ದೊಡ್ಡ ಸವಾಲಾಗಿ ಪರಿಣಮಿಸಿದೆ ಎಂದು ಹೇಳಬಹುದಾಗಿದೆ.

ಗ್ರಾಮೀಣ ಪ್ರದೇಶಗಳಲ್ಲಿ ಬಡತನ ಮತ್ತು ನಿರುದ್ಯೋಗಗಳಂತಹ ಸಮಸ್ಯೆಗಳು ಹೆಚ್ಚಾಗಿ ಇರುವುದರಿಂದ ಕಾಯಿದೆಗಳ ಬಗ್ಗೆ ಹೆಚ್ಚಿನ ಗಮನವನ್ನು ಹರಿಸುವುದಿಲ್ಲ. ಕುಟುಂಬದ ನಿರ್ವಹಣೆಯೇ ಅವರಿಗೆ ಸವಾಲಾಗಿ ಪರಿಣಿಸಿರುವುದರಿಂದ ಅದರಲ್ಲಿಯೇ ಹೆಚ್ಚೆಚ್ಚು ತೊಡಗಿಕೊಂಡುಬಿಡುತ್ತಾರೆ. ಇಂತಹ ಸಂದರ್ಭದಲ್ಲಿ ಈ ಕಾನೂನನ್ನು ಅನುಷ್ಠಾನಕ್ಕೆ ತರುವುದು ತುಂಬಾ ಕಷ್ಟವಾಗುತ್ತದೆ. ಹಾಗಾಗಿ ಈ ಇದೂ ಸಹ ಒಂದು ಸವಾಲಾಗಿದೆ ಎಂದು ಹೇಳಬಹುದು.

ಆಧುನಿಕತೆಯಿಂದಾಗಿ ವಿಜ್ಞಾನ ತಂತ್ರಜ್ಞಾನಗಳ ಬೆಳವಣಿಗೆಯು ಕಾನೂನುಗಳನ್ನು ಗೌಣವಾಗಿಸಿರುವುದು ಕಂಡುಬರುತ್ತದೆ. ಮಹಿಳೆಯ ದೇಹವನ್ನು ಒಂದು ಪ್ರಯೋಗಾಲಯದಂತೆ ಮಾಡಿ ಅವಳನ್ನು ಒಂದು ವಸ್ತುವಿನ ರೂಪದಲ್ಲಿ ಬಳಸಿಕೊಳ್ಳುತ್ತಿದೆ. ಇವುಗಳೂ ಸಹ ಈ ಕಾಯಿದೆಯ ಅನುಷ್ಠಾನಕ್ಕೆ ಸವಾಲಾಗಿದೆ ಎಂದು ಹೇಳಬಹುದು. ಏಕೆಂದರೆ ಆಧುನಿಕತೆಯಿಂದಾಗಿ ಕುಟುಂಬದಲ್ಲಿನ ಹಲವಾರು ಕೆಲಸಗಳು ಯಂತ್ರಗಳೇ ಮಾಡುತ್ತಿರುವುದರಿಂದ ಇಲ್ಲಿ ಮಹಿಳೆಯರ ಮೇಲೆ ಯಾವುದೇ ರೀತಿಯ ಹಿಂಸೆ ಎಂಬುದು ಆಗುತ್ತಿಲ್ಲ ಎಂದು ಹೇಳಲಾಗುತ್ತಿದೆ. ಮತ್ತು ಮನೆಯ ಕೆಲಸಗಳಿಂದ ಮಹಿಳೆಗೆ ಬಿಡುಗಡೆ ದೊರೆಯುತ್ತಿದೆ ಎಂದು ಹೇಳಲಾಗುತ್ತಿದೆ. ಇದನ್ನು ಮಹಿಳೆ ಕುರುಡಾಗಿ ಮತ್ತು ಇದೇ ಅವಳಿಗೆ ಪರಮ ಸುಖಕೊಡುತ್ತದೆ ಎಂದು ನಂಬಿಬಿಟ್ಟಿದ್ದಾಳೆ. ಆದರೆ ಕುಟುಂಬದಲ್ಲಿ ಬಳಸುತ್ತಿರುವ ಯಂತ್ರಗಳನ್ನು ಬಳಸುವವರು ಯಾರು ಮತ್ತು ಅವುಗಳಿಂದ ಬಿಡುವು ಎಂಬುದು ದೊರೆತಿದೆಯೋ ಎಂದು ನೋಡಿದರೆ ಉತ್ತರ ಇಲ್ಲ. ಏಕೆಂದರೆ ಮನೆಕೆಲಸಗಳಿಗೆ ಯಂತ್ರೋಪಕರಣಗಳನ್ನು ಬಳಸಿದರೂ ಸಹ ಅವುಗಳಿಂದ ಮಹಿಳೆಯರ ಜವಾಬ್ದಾರಿ ಇನ್ನೂ ಹೆಚ್ಚಾಗಿ ಹೋಗಿದೆ. ಆದರೆ ಇದು ಅವಳಿಗೆ ತಿಳಿದುಬರುತ್ತಿಲ್ಲ. ಹಾಗಾಗಿ ಅವಳಿಗೆ

ಈ ಕಾಯಿದೆಯ ಬಗ್ಗೆ ತಿಳಿದುಕೊಳ್ಳಲು ಆಸಕ್ತಿ ವಹಿಸುವುದಿಲ್ಲ. ಅದೇ ರೀತಿಯಲ್ಲಿ ವಿಜ್ಞಾನ ತಂತ್ರಜ್ಞಾನದ ಫಲವಾಗಿ ಮಹಿಳೆಯ ಗರ್ಭಕೋಶದಲ್ಲಿನ ಮಗುವಿನ ಬೆಳವಣಿಗೆಯನ್ನು ತಿಳಿಯಲು ಅಮ್ನಿಯೋ ಸಿಂಥೆಸಿಸ್ ಎಂಬ ಯಂತ್ರವನ್ನು ಕಂಡುಹಿಡಿಯಲಾಯಿತು. ಆದರೆ ಇಂದು ಇದನ್ನು ಬ್ರೂಣಲಿಂಗ ಪತ್ತೆಗೆ ಬಳಸಿಕೊಳ್ಳಲಾಗುತ್ತಿದೆ. ಇದರಿಂದ ಲಿಂಗ ಅಸಮಾನತೆಯ ಜೊತೆಗೆ ಮಹಿಳೆಯರಿಗೆ ಹಲವಾರು ರೀತಿಯ ತೊಂದರೆಗಳು ಉಂಟಾಗುತ್ತಿವೆ. ಭ್ರೂಣಲಿಂಗ ಪರೀಕ್ಷೆಯ ಕೌಟುಂಬಿಕ ಹಿಂಸೆಗೆ ದಾರಿ ಮಾಡಿಕೊಡುತ್ತದೆ ಮತ್ತು ಅಂತಹ ಸಂದರ್ಭದಲ್ಲಿ ಈ ಕಾಯಿದೆಯು ಅನುಷ್ಠಾನಕ್ಕೆ ಬರಲು ಒಂದು ತೊಡಕಾಗಿ ಪರಿಣಮಿಸುತ್ತದೆ ಎಂಬುದು. ಏಕೆಂದರೆ ಭ್ರೂಣಲಿಂಗ ಪರೀಕ್ಷೆಯ ನಂತರ ಗರ್ಭದಲ್ಲಿರುವ ಮಗು ಹೆಣ್ಣು ಎಂದು ತಿಳಿದ ಕೂಡಲೆ ಕುಟುಂಬದಲ್ಲಿ ಮಹಿಳೆಗೆ ಹಿಂಸೆ ಸಂಭವಿಸುವುದಂತೂ ನಿಜ ಮತ್ತು ವೈದ್ಯರುಗಳು ಈ ಕಾಯಿದೆಯ ಬಗ್ಗೆ ಅರಿವನ್ನು ಹೊಂದಿದ್ದರೆ ಈ ರೀತಿಯಾಗಿ ಹಿಂಸೆ ನಡೆಯದಂತೆ ನೋಡಿಕೊಳ್ಳುತ್ತಾರೆ. ಆದರೆ ಈ ಕಾಯಿದೆಯ ಅನುಷ್ಠಾನದಲ್ಲಿ ಪ್ರಮುಖ ಪಾತ್ರ ವಹಿಸುವ ವೈದ್ಯರುಗಳಿಗೆ ಈ ಕಾಯಿದೆಯ ಬಗ್ಗೆ ಅರಿವು ಇಲ್ಲದಿರುವುದು ಮತ್ತು ಅವರೂ ಸಹ ಈ ವಿಜ್ಞಾನ ತಂತ್ರಜ್ಞಾನಗಳಿಗೆ ದಾಸರಾಗಿರುವುದರಿಂದ ಕೇವಲ ಲಾಭದ ಉದ್ದೇಶಗಳನ್ನು ಹೊಂದಿರುವುದರಿಂದ ಈ ಕಾಯ್ದೆಯ ಅನುಷ್ಠಾನಕ್ಕೆ ಒಂದು ದೊಡ್ಡ ಸವಾಲಾಗಿ ಪರಿಣಮಿಸಿದೆ ಎಂದು ಹೇಳಬಹುದು.

"ಸಾಂತ್ವಾನ, ಕೌಟುಂಬಿಕ ಸಲಹಾ ಕೇಂದ್ರಗಳಲ್ಲಿ ಇರುವಂತಹ ಮಾನವ ಸಂಪನ್ಮೂಲಗಳು ಸರಿಯಾಗಿ ಕಾರ್ಯ ನಿರ್ವಹಿಸುವಂತೆ ಮಾಡಬೇಕು. ಕೌಟುಂಬಿಕ ಸಲಹಾ ಕೇಂದ್ರವು ಬಹುಪಾಲು ಮಹಿಳೆ ಮತ್ತು ಮಕ್ಕಳೊಡನೆ ಕೆಲಸ ಮಾಡುತ್ತವೆ. ಅವು ನಿರ್ದಿಷ್ಟವಾಗಿ ಸಂಕಟದಲ್ಲಿರುವ ಮಹಿಳೆಯರಿಗೆ ಸಹಾಯ ಮಾಡುತ್ತವೆ. ಈ ಕೌಟುಂಬಿಕ ಸಲಹಾ ಕೇಂದ್ರವು ಇಬ್ಬರು ಸಲಹಾಗಾರರು (ಅದರಲ್ಲಿ ಒಬ್ಬರು ಮಹಿಳೆ ಇರಬೇಕು). ಒಬ್ಬರು ಗುಮಾಸ್ತರು, ಒಬ್ಬರು ಬೆರಳಚ್ಚುಗಾರರ ನೇಮಕಾತಿಯನ್ನು ಕಡ್ಡಾಯಗೊಳಿಸಿದೆ. ಹಾಗೆಯೇ ಸಾಂತ್ವಾನ ಕೇಂದ್ರಗಳಲ್ಲಿ ಒಬ್ಬರು ಸಲಹಾಗಾರರು, ಮೂವರು ಕ್ಷೇತ್ರ ಕಾರ್ಯಕರ್ತರು (ಇಬ್ಬರು ಮಹಿಳೆಯರು, ಒಬ್ಬ ಪುರುಷ) ಇರಬೇಕೆಂದು ತಿಳಿಸಿದೆ. ಆದರೆ ವಾಸ್ತವ ಸಂಪೂರ್ಣವಾಗಿ ಬೇರೆಯಾಗಿದೆ. ಎಲ್ಲ ಕೌಟುಂಬಿಕ ಸಲಹಾ ಕೇಂದ್ರಗಳು ಇಬ್ಬರು ಸಲಹಾಗಾರರನ್ನು ಹೊಂದಿಲ್ಲ. ಹಾಗಾಗಿ ನಿರ್ವಹಣೆ ಸರಿಯಾಗಿ ನಡೆಯುತ್ತಿಲ್ಲ. ಹಾಗೂ ಸಾಂತ್ವಾನ ಕೇಂದ್ರಗಳಲ್ಲಿ ಪ್ರತೀ ಕೇಂದ್ರಕ್ಕೆ ಒಬ್ಬರೇ ಸಲಹಾಗಾರರು ಇರುವುದರಿಂದ ಅವರ ಗೈರು ಹಾಜರಿಯಲ್ಲಿ ಕೆಲಸದ ಒತ್ತಡಗಳು ಜಾಸ್ತಿಯಾಗಿ ನಿರ್ವಹಣೆ ಸರಿಯಾಗಿ ನಡೆಯುವುದಿಲ್ಲ"[9] ಮಹಿಳೆಯರ ಸಂರಕ್ಷಣೆಗೆಂದೇ ರಚನೆಗೊಂಡಿರುವ ಈ ಕೇಂದ್ರಗಳಲ್ಲಿಯೇ ಹಲವಾರು ಸಮಸ್ಯೆಗಳು ಕಂಡುಬರುವುದರಿಂದ ಈ ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ಸಂರಕ್ಷಣಾ ಕಾಯಿದೆಯು ಅನುಷ್ಠಾನಕ್ಕೆ ಬರಲು ಒಂದು ಸಾವಾಲಾಗಿ ಪರಿಣಮಿಸಿದೆ ಎಂದು ಹೇಳಬಹುದು.

೨. ಕಾಯಿದೆಯ ಅನುಷ್ಠಾನದಲ್ಲಿನ ಸಾಧ್ಯತೆಗಳು

ಈ ಕಾಯಿದೆಯು ಸಮರ್ಥವಾಗಿ ಅನುಷ್ಠಾನಕ್ಕೆ ಬರಲು ಹಲವಾರು ಸಾಧ್ಯತೆಗಳನ್ನು ಕಂಡುಕೊಳ್ಳಬೇಕಾಗಿದೆ. ಅವುಗಳು ಈ ಕೆಳಗಿನಂತಿವೆ.

**ಈ ಕಾಯಿದೆಗೆ ಸಂಬಂಧಿಸಿದಂತೆ ಜಾಗೃತಿ ಶಿಬಿರಗಳನ್ನು ಏರ್ಪಡಿಸುವುದು**

ಇತ್ತೀಚೆಗೆ ಕನ್ನಡ ವಿಶ್ವವಿದ್ಯಾಲಯದ, ಮಹಿಳಾ ಅಧ್ಯಯನ ಕೇಂದ್ರದ ನಿರ್ದೇಶಕರಾದ ಡಾ.ಶೈಲಜಾ ಹಿರೇಮಠ ಅವರು ಈ ಕಾಯಿದೆಯು ಸಮರ್ಥವಾಗಿ ಅನುಷ್ಠಾನದಲ್ಲಿ ಬರಲು ಮತ್ತು ಇದರ ಬಗ್ಗೆ ಜನರಲ್ಲಿ ಅರಿವನ್ನು ಮೂಡಿಸುವುದರ ಸಲುವಾಗಿ ಮೂರು ದಿನಗಳ ಕಾರ್ಯಾಗಾರವನ್ನು ಹಮ್ಮಿಕೊಂಡಿದ್ದರು. ಈ ಕಾರ್ಯಾಗಾರದಲ್ಲಿ ಪಟ್ಟಣ ಪಂಚಾಯ್ತಿ ಸದಸ್ಯರು, ಪಟ್ಟಣದ ಪೋಲೀಸರು, ಅಂಗನವಾಡಿ ಕಾರ್ಯಕರ್ತೆಯರು, ಪ್ರಾಥಮಿಕ ಶಾಲಾ ಶಿಕ್ಷಕಿಯರು, ಮಹಿಳಾ ಸ್ವ ಸಹಾಯ ಸಂಘಗಳು ಮತ್ತು ಕಮಲಾಪುರದ ನಾಗರೀಕರು ಭಾಗವಹಿಸಿದ್ದರು. ರಾಜ್ಯದಲ್ಲಿನ ಪ್ರಮುಖ ವಿದ್ವಾಂಸರನ್ನು ಕರೆಯಿಸಿ ಕೌಟುಂಬಿಕ ಹಿಂಸೆ ತಡೆ ಕಾಯಿದೆಯ ಬಗ್ಗೆ ಜಾಗೃತಿಯನ್ನು ಮೂಡಿಸಲಾಯಿತು. ಈ ಕಾಯಿದೆಯ ಬಗ್ಗೆ ಸಂಪೂರ್ಣವಾಗಿ ಮಾಹಿತಿಯನ್ನು ತಿಳಿಸಿಕೊಡಲಾಯಿತು. ಈ ಸಂದರ್ಭದಲ್ಲಿ ಹಲವಾರು ಕರ ಪತ್ರಗಳನ್ನು ತಯಾರಿಸಿ ಜನರಿಗೆ ಹಂಚಲಾಯಿತು. ಇದು ಒಂದು ಉತ್ತಮ ಶಿಬಿರವಾಗಿತ್ತು. ಹೀಗೆ ವಿಶ್ವವಿದ್ಯಾಲಯ ಮಟ್ಟದಲ್ಲಿ ಈ ರೀತಿಯ ಜಾಗೃತಿ ಕಾರ್ಯಕ್ರಮಗಳನ್ನು ಏರ್ಪಡಿಸುವುದರ ಮೂಲಕ ಜನರಲ್ಲಿ ಕಾನೂನುಗಳ ಬಗ್ಗೆ ಅರಿವನ್ನು ಮೂಡಿಸುವ ಕಾರ್ಯವನ್ನು ಮಾಡಬೇಕಾಗುತ್ತದೆ. ಕೇವಲ ಕನ್ನಡ ವಿಶ್ವವಿದ್ಯಾಲಯ ಮಾತ್ರವಲ್ಲ ರಾಜ್ಯದಲ್ಲಿನ ಎಲ್ಲಾ ವಿಶ್ವವಿದ್ಯಾಲಯಗಳೂ ಸಹ ಈ ರೀತಿಯ ಮತ್ತು ಈ ಕಾಯಿದೆಗೆ ಸಂಬಂಧಿಸಿದಂತೆ ಜಾಗೃತಿ ಶಿಬಿರಗಳನ್ನು ಏರ್ಪಡಿಸಿದ್ದೇ ಆದಲ್ಲಿ ಈ ಕಾನೂನು ಅತ್ಯಂತ ಸಮರ್ಥವಾಗಿ ಜಾರಿಗೆ ಬರುತ್ತದೆ ಎಂದು ಹೇಳಬಹುದಾಗಿದೆ.

ಈ ಕಾಯಿದೆಯು ಅನುಷ್ಠಾನಕ್ಕೆ ಬರಲು ಸರ್ಕಾರೇತರ ಸಂಘ ಸಂಸ್ಥೆಗಳ ಮತ್ತು ಮಹಿಳಾ ಸಂಘಟನೆಗಳ ಪಾತ್ರ ಬಹಳ ಮಹತ್ವದ್ದಾಗಿದೆ ಎಂದು ಹೇಳಬಹುದು. ಜಾಗೃತಿ ಕಾರ್ಯಕ್ರಮಗಳು, ಜಾಹಿರಾತುಗಳನ್ನು ನೀಡುವುದು, ಕರಪತ್ರಗಳನ್ನು ಹಂಚುವುದು, ಬೀದಿ ನಾಟಕಗಳನ್ನು ಮಾಡುವುದು ಈ ಎಲ್ಲಾ ಕಾರ್ಯಕ್ರಮಗಳನ್ನು ಸರ್ಕಾರೇತರ ಸಂಘ ಸಂಸ್ಥೆಗಳು ನಿರ್ವಹಿಸಿದರೆ ಈ ಕಾಯಿದೆಯು ಸಮರ್ಥವಾಗಿ ಅನುಷ್ಠಾನಕ್ಕೆ ಬರುತ್ತದೆ ಎಂದು ಹೇಳಬಹುದು.

"ಪೋಲೀಸ್ ಸುಧಾರಣೆಗೆ ಸಂಬಂಧಿಸಿದಂತೆ ಮತ್ತು ಲಿಂಗ ಕಾಳಜಿ ಕುರಿತಂತೆ ರಾಜ್ಯ ಸರಕಾರವು ಪೋಲೀಸ್ ಪಡೆಯೊಳಗಡೆಯೇ ಕೆಲವು ವಿಶೇಷ ಪ್ರಯತ್ನಗಳನ್ನು ಪ್ರಾರಂಬಿಸಿದೆ. ೨೦೦೧ರಲ್ಲಿ ಯೂನಿಸೆಫ್ ಸಹಬಾಗಿತ್ವದೊಡನೆ ಲಿಂಗ ಸೂಕ್ಷ್ಮತೆ ಬೆಳೆಸುವ ಮತ್ತು ಜನಸ್ನೇಹಿ ಪೋಲೀಸ್ ಯೋಜನೆಯನ್ನು ಪ್ರಾರಂಭಿಸಲಾಯಿತು. ಈ ಯೋಜನೆಯು ಮಹಿಳೆ ಮತ್ತು ಮಕ್ಕಳ ಮೇಲಿನ ಹಿಂಸೆಗೆ

ಸಂಬಂಧಪಟ್ಟ ಪ್ರಕರಣಗಳೊಂದಿಗೆ ಹೇಗೆ ವ್ಯವಹರಿಸಬೇಕೆಂದು ತಿಳಿಸಿಕೊಡುತ್ತದೆ"[7] ಈ ರೀತಿಯ ಯೋಜನೆಗಳೂ ಸಹ ಈ ಕಾಯಿದೆಯ ಅನುಷ್ಠಾನಕ್ಕೆ ಸಹಕಾರಿಯಾಗುತ್ತವೆ.

ರಾಜ್ಯ ಮಹಿಳಾ ಆಯೋಗ ಮತ್ತು ಕರ್ನಾಟಕ ರಾಜ್ಯ ಮಾನವ ಹಕ್ಕುಗಳ ಆಯೋಗ ಇವುಗಳು ತಮ್ಮ ಅಧಿಕಾರ ವ್ಯಾಪ್ತಿಯಲ್ಲಿ ಸಮರ್ಥವಾಗಿ ಕಾರ್ಯನಿರ್ವಹಿಸಿದ್ದೇ ಆದಲ್ಲಿ ಕೌಟುಂಬಿಕ ಹಿಂಸೆ ತಡೆ ಕಾಯಿದೆಯು ಸಮಾಜದಲ್ಲಿ ಬಲಿಷ್ಟವಾಗಿ ತಳವೂರಲು ಸಹಕಾರಿಯಾಗುತ್ತದೆ.

ಮಹಿಳೆಯರು ಹೆಚ್ಚು ಶಿಕ್ಷಣದ ಕಡೆ ಗಮನಹರಿಸಿದರೆ ಈ ಕಾಯ್ದೆಯು ಅನಾಯಾಸವಾಗಿ ಅನುಷ್ಠಾನಕ್ಕೆ ಬರುತ್ತದೆ ಎಂದು ಹೇಳಬಹುದು. ಏಕೆಂದರೆ ಗ್ರಾಮೀಣ ಪ್ರದೇಶಗಳಲ್ಲಿ ಇಂದು ಅನಕ್ಷರಸ್ಥರ ಸಂಖ್ಯೆ ಹೆಚ್ಚಾಗಿದ್ದು ಇವರಿಗೆ ಯಾವುದೇ ರೀತಿಯ ಕಾನೂನುಗಳ ಬಗ್ಗೆ ಅರಿವು ಇರುವುದಿಲ್ಲ. ಮಹಿಳಾ ಶಿಕ್ಷಣದ ಬಗ್ಗೆ ಪುರುಷಶಾಹಿ ವ್ಯವಸ್ಥೆಗೆ ಒಂದು ರೀತಿಯ ಅಸಡ್ಡೆ ಮನೋಭಾವವಿದೆ. ಆದರೆ ಮಹಿಳೆಗೆ ಶಿಕ್ಷಣ ನೀಡದಿದ್ದರೆ ಅಥವಾ ಮಹಿಳೆಯರು ಸಾಕ್ಷರರಾಗದಿದ್ದರೆ ಯಾವುದೇ ರೀತಿಯ ಸಾಮಾಜಿಕ ಪ್ರಗತಿಪರ ಕಾರ್ಯಯೋಜನೆಗಳು ಅರ್ಥಪೂರ್ಣವಾಗಲಾರವು ಎಂಬುದು ವಾಸ್ತವ ಸಂಗತಿ. ಈ ವಾಸ್ತವತೆಯನ್ನು ಅರಿತು ಮಹಿಳೆಯರಿಗೆ ಶಿಕ್ಷಣವನ್ನು ನೀಡಿದ್ದೇ ಆದಲ್ಲಿ ಈ ಕಾಯಿದೆಯ ಅನುಷ್ಠಾನಕ್ಕೆ ತುಂಬಾ ಸಹಕಾರಿಯಾಗುತ್ತದೆ. ಮತ್ತು ಒಂದು ಉತ್ತಮ ಸಮಾಜ ನಿರ್ಮಾಣಕ್ಕೆ ನಾಂದಿಯಾಗುತ್ತದೆ.

ಲೈಂಗಿಕ ದೌರ್ಜನ್ಯ, ವರಕ್ಷಿಣೆ ಕಿರುಕುಳ ಮತ್ತು ಕೌಟುಂಬಿಕ ಹಿಂಸೆಯನ್ನು ಎದುರಿಸುತ್ತಿರುವ ಮಹಿಳೆಯರ ಅಗತ್ಯವನ್ನು ಉದ್ದೇಶಿಸುವ ಗುರಿಗಳನ್ನು ಹೊಂದಿರುವ ಸಾಂತ್ವಾನ ಯೋಜನೆ ಮತ್ತು ಕಷ್ಟದ ಪರಿಸ್ಥಿತಿಯಲ್ಲಿರುವ ಮಹಿಳೆಯರಿಗಾಗಿ ದೀರ್ಘಾವಧಿ ಸ್ವರೂಪದ ಸೇವೆಗಳನ್ನು ಒದಗಿಸುವ ಸ್ವಾಧಾರ್ ಯೋಜನೆಗಳು ಸಮರ್ಥವಾಗಿ ಕಾರ್ಯಗಳನ್ನು ನಿರ್ವಹಿಸಿದ್ದೇ ಆದಲ್ಲಿ ಈ ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ಸಂರಕ್ಷಣಾ ಕಾಯ್ದೆಯು ಅನುಷ್ಠಾನಕ್ಕೆ ಬರಲು ತುಂಬಾ ಸಹಕಾರಿಯಾಗುತ್ತದೆ.

ಕೌಟುಂಬಿಕ ನ್ಯಾಯಾಲಯಗಳನ್ನು ರಚಿಸುವುದರಿಂದ ಕುಟುಂಬದಲ್ಲಿಯ ಯಾವುದೇ ರೀತಿಯ ಹಿಂಸೆಯ ವರದಿಗಳು ನಡೆದಲ್ಲಿ ಈ ನ್ಯಾಯಾಲಯದಲ್ಲಿಯೇ ಹಿಂಸೆಯನ್ನು ತಡೆಗಟ್ಟಲು ಕ್ರಮಗಳನ್ನು ಕೈಗೊಂಡು ಈ ಕಾಯಿದೆಯು ಮಹಿಳೆಯರಿಗೆ ವರದಾನವಾಗುವಂತೆ ನೋಡಿಕೊಳ್ಳಬಹುದಾಗಿದೆ.

ನ್ಯಾಯಾಲಯಗಳಲ್ಲಿನ ನ್ಯಾಯಾದೀಶರು ನಿಷ್ಪಕ್ಷಪಾತವಾಗಿ ಕಾರ್ಯನಿರ್ವಹಿಸಲು ಕ್ರಮಗಳನ್ನು ಕೈಗೊಳ್ಳಬೇಕು. ಏಕೆಂದರೆ ಪುರುಷಶಾಹಿ ಮೌಲ್ಯಗಳನ್ನು ಅಳವಡಿಸಿಕೊಂಡಿರುವ ನ್ಯಾಯಾದೀಶರು ಮಹಿಳೆಯರಿಗೆ ನ್ಯಾಯ ಒದಗಿಸಿಕೊಡುತ್ತಾರೆ ಎಂಬುದು ಸತ್ಯಕ್ಕೆ ದೂರದ ವಿಷಯವಾಗುತ್ತದೆ. ಹಾಗಾಗಿ ನ್ಯಾಯಾದೀಶರು ನಿಷ್ಪಕ್ಷಪಾತವಾಗಿ ಕೆಲಸ ನಿರ್ವಹಿಸುವಂತೆ ಮಾಡಬೇಕು. ಅಂದಾಗ ಮಾತ್ರ ಮಹಿಳೆಯರಿಗೆ ನ್ಯಾಯ ದೊರಕುತ್ತದೆ ಮತ್ತು ಕಾನೂನಿನ ಬಗ್ಗೆ ಜನರಲ್ಲಿ ಅರಿವು ಮೂಡುತ್ತದೆ.

ಬಹಳ ಮುಖ್ಯವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಲಿಂಗ ಸಂಬಂಧಿ ತಿಳುವಳಿಕೆ ಕಾರ್ಯಕ್ರಮಗಳನ್ನು ಏರ್ಪಡಿಸಬೇಕಾಗುತ್ತದೆ. ಈ ಕಾರ್ಯಕ್ರಮಗಳನ್ನು ಮುಖ್ಯವಾಗಿ ಸರಕಾರ ಮತ್ತು ಸರಕಾರೇತರ ಸಂಸ್ಥೆಗಳು ಏರ್ಪಡಿಸಬೇಕು. ಸರಕಾರವು ಶಿಕ್ಷಣದಲ್ಲಿನ ಪಠ್ಯಕ್ರಮಗಳಲ್ಲಿ ಬದಲಾವಣೆಯನ್ನು ತರಬೇಕಾಗುತ್ತದೆ. ಅಂದರೆ ಪ್ರಾಥಮಿಕ ಹಂತದಿಂದ ಹಿಡಿದು ಉನ್ನತ ಮಟ್ಟದ ಶಿಕ್ಷಣದವರೆಗೆ ಲಿಂಗ ಸಮಾನತೆಯಿಂದ ಕೂಡಿದ ಪಠ್ಯಕ್ರಮವನ್ನು ರೂಪಿಸಬೇಕಾಗುತ್ತದೆ. ಆಗ ಸ್ತ್ರೀಪುರುಷರ ನಡುವೆ ಸಮಾನತೆಯ ಮನೋಭಾವ ಬೆಳೆಯುತ್ತದೆ. ಇದರಿಂದ ಯಾವುದೇ ಕಾನೂನು ಜಾರಿಗೆ ಬಂದರೂ ಸಹ ಅದು ಯಾವುದೇ ಅಡೆ ತಡೆ ಇಲ್ಲದೆ ಅನುಷ್ಠಾನಕ್ಕೆ ಬರುತ್ತದೆ. ಹಾಗೆಯೇ ಸರ್ಕಾರೇತರ ಸಂಘ-ಸಂಸ್ಥೆಗಳು ಈ ಲಿಂಗ ಸಮಾನತೆಯ ಕುರಿತು ಹಲವಾರು ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕಾಗುತ್ತದೆ. ಹಾಗೆಯೇ ಕೌಟುಂಬಿಕ ಹಿಂಸೆಯಿಂದ ಬಳಲುತ್ತಿರುವ ಮಹಿಳೆಯರಿಗಾಗಿ ರಾಜ್ಯದಲ್ಲಿರುವ ಸೌಲಭ್ಯಗಳ ಬಗ್ಗೆ ತಿಳಿಸಿಕೊಡಬೇಕಾಗುತ್ತದೆ. ಅಂದಾಗ ಮಾತ್ರ ಈ ಕಾಯ್ದೆಯ ಅನುಷ್ಠಾನಕ್ಕೆ ಯಾವುದೇ ರೀತಿಯ ಅಡೆತಡೆಗಳು ಇಲ್ಲದಂತಾಗುತ್ತದೆ.

ಹೀಗೆ ಈ ಕಾಯಿದೆಯು ಅನುಷ್ಠಾನದಲ್ಲಿ ಬರಲು ತನ್ನದೇ ಆದಂತಹ ಹಲವಾರು ರೀತಿಯ ಸವಾಲುಗಳನ್ನು ಎದಿರಿಸುವುದನ್ನು ಹಾಗೆಯೇ ಈ ಕಾಯಿದೆ ಸಮರ್ಥವಾಗಿ ಜಾರಿಗೊಳ್ಳಲು ಯಾವ ಯಾವ ಸಾಧ್ಯತೆಗಳು ಇವೆ ಎಂಬುದನ್ನು ಸಹ ನೋಡಲಾಗಿದೆ. ಒಟ್ಟಿನಲ್ಲಿ ಈ ಕಾಯಿದೆಯು ಅನುಷ್ಠಾನಕ್ಕೆ ಬರಲು ಎಷ್ಟೇ ಅಡೆತಡೆಗಳು ಕಂಡುಬಂದರೂ ಸಹ ಅವುಗಳನ್ನು ಎದುರಿಸಿ ಮಹಿಳೆಯರಿಗೆ ಮಾನಸಿಕ ಬೆಂಬಲವನ್ನು ಒದಗಿಸಿಕೊಡಬೇಕಾಗಿದೆ. ಇದರ ಜೊತೆ ಜೊತೆಗೆ ಈ ಕಾಯಿದೆಯ ಬಗ್ಗೆ ಸಮಾಜದ ಪ್ರತಿಯೊಬ್ಬ ಪ್ರಜೆಯೂ ತಿಳಿದುಕೊಂಡಾಗ ಒಂದು ಉತ್ತಮ ಕುಟುಂಬ ರಚನೆಯಾಗುವುದರಲ್ಲಿ ಸಂಶಯವಿಲ್ಲ.

**ಅಡಿ ಟಿಪ್ಪಣಿ**

೧. ಕರ್ನಾಟಕದಲ್ಲಿ ಹಿಂಸೆಗೊಳಗಾದ ಮಹಿಳೆಯರಿಗಾಗಿ ಸರ್ಕಾರಿ ಸೇವೆಗಳು: ಒಂದು ಅಧ್ಯಯನ, ಇಂದು ಸುಬ್ರಹ್ಮಣ್ಯಂ ಹಾಗೂ ಉಷಾ.ಬಿ.ಎನ್., ಪುಟ.೨೭, ೧೦.

# ಅಧ್ಯಾಯ ೭

# ಅಧ್ಯಯನದ ಫಲಿತಗಳು

ಪ್ರಸ್ತುತ ಕೌಟುಂಬಿಕ ದೌರ್ಜನ್ಯದಿಂದ ಮಹಿಳೆಯರ ಸಂರಕ್ಷಣಾ ಕಾಯಿದೆಯ ಕುರಿತಂತೆ ಮಹಿಳೆಯರಲ್ಲಿ ಯಾವ ರೀತಿಯ ಅರಿವು ಇದೆ ಎಂಬುದನ್ನು ಅಧ್ಯಯನ ಮಾಡಲಾಗಿದೆ. ಕುಟುಂಬದಲ್ಲಿ ಮಹಿಳೆಯರು ಅನುಭವಿಸುತ್ತಿರುವ ಹಿಂಸೆಯನ್ನು ತಡೆಯಲು ಈ ಮೊದಲು ಭಾರತೀಯ ದಂಡ ಸಂಹಿತೆಯ ೪೯೮-ಎ ಪ್ರಕರಣವನ್ನು ಜಾರಿಗೆ ತರಲಾಗಿತ್ತು. ಆದರೆ ಈ ಪ್ರಕರಣವು ಮಹಿಳೆಯರ ಮೇಲಿನ ಹಿಂಸೆಯನ್ನು ತಡೆಯುವಲ್ಲಿ ಹಲವಾರು ಲೋಪದೋಷಗಳನ್ನು ಒಳಗೊಂಡಿತ್ತು. ಹಾಗಾಗಿ ಮಹಿಳೆಗೆ ಕುಟುಂಬದಲ್ಲಿಯ ಹಿಂಸೆಯಿಂದ ಶಾಶ್ವತವಾಗಿ ಪರಿಹಾರ ಸಿಗುವ ನಿಟ್ಟಿನಲ್ಲಿ ೨೦೦೫ರಲ್ಲಿ ಒಂದು ಪ್ರತ್ಯೇಕವಾದ ಕಾನೂನನ್ನೇ ಜಾರಿಗೆ ತರಲಾಯಿತು. ಅದೇ ಕೌಟುಂಬಿಕ ದೌರ್ಜನ್ಯದಿಂದ ಮಹಿಳೆಯರ ಸಂರಕ್ಷಣಾ ಕಾಯಿದೆ-೨೦೦೫". ಈ ಕಾಯಿದೆಯು ಜಾರಿಗೆ ಬಂದು ಇಂದಿಗೆ ನಾಲ್ಕು ವರ್ಷಗಳು ಕಳೆದರೂ ಸಹ ಇದರ ಬಗ್ಗೆ ಜನರಲ್ಲಿ ಅರಿವು ಇಲ್ಲದೇ ಇರುವುದನ್ನು ನಾವು ಹಲವು ಅಂಶಗಳಿಂದ ಕಂಡುಕೊಂಡಿದ್ದೇವೆ. ಮುಖ್ಯವಾಗಿ ಗ್ರಾಮೀಣ ಭಾಗದಲ್ಲಿನ ಮಹಿಳೆಯರು ಅಕ್ಷರಸ್ಥರಾಗಿದ್ದು ಅವರಿಗೆ ಈ ಕಾಯಿದೆಗಳ ಬಗ್ಗೆ ತಿಳಿಯದೇ ಇರುವುದನ್ನು ಕಾಣಲಾಗಿದೆ. ಹಾಗೆಯೇ ಪುರುಷ ಪ್ರಧಾನ ಮೌಲ್ಯಗಳು ಮಹಿಳೆಯನ್ನು ಯಾವ ರೀತಿಯಲ್ಲಿ ಬಂಧಿಸಿಟ್ಟಿದೆ ಎಂಬುದನ್ನು ಸಹ ತಿಳಿದುಕೊಳ್ಳಲಾಗಿದೆ. ಈ ಕಾಯಿದೆ ಜಾರಿಗೆ ಬಂದು ಹಲವು ವರ್ಷಗಳಾದರೂ ಕೂಡ ಮಹಿಳೆ ಕುಟುಂಬದಲ್ಲಿಯ ಹಿಂಸೆಯಿಂದ ಮುಕ್ತಿಯನ್ನು ಪಡೆದಿಲ್ಲ. ತವರು ಮನೆಯಲ್ಲಿ ತಂದೆ ತಾಯಿಯಿಂದ, ಅಣ್ಣ, ತಮ್ಮಂದಿರಿಂದ ಮತ್ತು ಮದುವೆಯ ನಂತರ ಗಂಡನ ಮನೆಯಲ್ಲಿ ಗಂಡ, ಅತ್ತೆ, ಮಾವ, ನಾದಿನಿ ಹೀಗೆ ಮುಂತಾದವರಿಂದ ಹಿಂಸೆಯನ್ನು ಅನುಭವಿಸುತ್ತಲೆ ಇದ್ದಾಳೆ. ಮಹಿಳೆ ಹಲವಾರು ಸಂಪ್ರದಾಯ, ಆಚರಣೆಗಳು ಮೂಢನಂಬಿಕೆಗಳ ಬಲೆಯಲ್ಲಿ ಸಿಲುಕಿ ಒದ್ದಾಡುತ್ತಿದ್ದಾಳೆ. ಅವುಗಳೇ ಜೀವನದ ಅಂತಿಮ ಗುರಿ ಅಥವಾ ಅವುಗಳಿಂದಲೇ ಜೀವನ ಎಂಬ ಚಿಂತನೆಗಳು ಮಹಿಳೆಯರಲ್ಲಿ ಮೂಡಿರುವುದರಿಂದ ಒಂದು ಚೌಕಟ್ಟಿನಡಿಯಲ್ಲಿ ಜೀವಿಸುತ್ತಿರುವುದು ಕಂಡು ಬರುತ್ತವೆ. ಮುಖ್ಯವಾಗಿ ವ್ಯವಸ್ಥೆಯಲ್ಲಿ ಇರುವಂತಹ ಲಿಂಗ ಅಸಮಾನತೆಯನ್ನು ತೊಡೆದುಹಾಕಲು ಈ ಕಾಯಿದೆ ಅತ್ಯಂತ ಉಪಯುಕ್ತವಾಗಿದೆ. ಆದರೆ ಈ ಲಿಂಗ ಸಮಾನತೆಯನ್ನು ಕಾಯ್ದುಕೊಳ್ಳಲು ಪುರುಷ ಮೌಲ್ಯಗಳು ಒಪ್ಪುತ್ತಿಲ್ಲ ಬದಲಾಗಿ ಹಲವಾರು ಅಡ್ಡಿ ಆತಂಕಗಳನ್ನು ಒಡ್ಡುತ್ತಿವೆ. ಹಾಗಾಗಿ ಮಹಿಳೆಯನ್ನು ಅಧೀನ ನೆಲೆಯಲ್ಲಿಯೇ ನೋಡುತ್ತಿದ್ದಾರೆ.

ಮಹಿಳೆಯನ್ನು ಅಧೀನ ನೆಲೆಯಲ್ಲಿಯೇ ನೋಡುವ ಚಿಂತನೆಗಳು ಇರುವುದರಿಂದ ಮಹಿಳಾ ಪರವಾದ ಯಾವುದೇ ಕಾನೂನುಗಳು ಜಾರಿಗೆ ಬಂದರೂ ಸಹ ಅವುಗಳು ಹಲವಾರು ರೀತಿಯಲ್ಲಿ ಸವಾಲುಗಳನ್ನು ಎದುರಿಸಬೇಕಾಗುತ್ತದೆ. ಈ ನಿಟ್ಟಿನಲ್ಲಿ ಈ ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ಸಂರಕ್ಷಣಾ ನಿಯಮವೂ ಕೂಡ ನಾನಾ ಬಗೆಯ ಸವಾಲುಗಳನ್ನು ಎದುರಿಸುತ್ತಿದೆ ಎಂದು ಹೇಳಬಹುದಾಗಿದೆ. ಒಟ್ಟಿನಲ್ಲಿ ಈ ಅಧ್ಯಯನದಿಂದ ನಮಗೆ ಗೋಚರಿಸುವ ಅಂಶಗಳೆಂದರೆ

೧. ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ಸಂರಕ್ಷಣಾ ಅಧಿನಿಯಮದ ಬಗ್ಗೆ ಜನರಲ್ಲಿ ಅದರಲ್ಲಿಯೂ ಮಹಿಳೆಯರಲ್ಲಿ ಯಾವುದೇ ಅರಿವು ಇಲ್ಲ.

೨. ಈ ಕಾಯಿದೆಯ ನಿರ್ವಹಣಾಗಾರರು ತಮ್ಮ ಅಧಿಕಾರ ವ್ಯಾಪ್ತಿಯಲ್ಲಿ ಸರಿಯಾಗಿ ಕಾರ್ಯನಿರ್ವ ಹಿಸುತ್ತಿಲ್ಲ.

೩. ಸರ್ಕಾರೇತರ ಸಂಘ ಸಂಸ್ಥೆಗಳು ಈ ಕಾಯಿದೆ ಜಾರಿಗೆ ಬರುವಲ್ಲಿ ಯಾವುದೇ ಮಹತ್ವದ ಪಾತ್ರವನ್ನು ವಹಿಸಿಲ್ಲ.

೪. ಪೊಲೀಸ್ ಠಾಣೆಗಳಲ್ಲಿ ಈ ಕಾಯಿದೆಗೆ ಸಂಬಂಧಿಸಿದಂತೆ ಯಾವುದೇ ರೀತಿಯ ಸರಿಯಾದ ದಾಖಲೆಗಳು ಇರುವುದು ಕಂಡು ಬರುವುದಿಲ್ಲ. ಬದಲಾಗಿ ಕೌಟುಂಬಿಕ ಹಿಂಸೆಗೆ ಸಂಬಂಧಿಸಿದ ವರದಿಗಳಾನಾದರೂ ಆದರೆ ಅವುಗಳನ್ನು ರಾಜಿ ಮಾಡಿಸುವುದರ ಮೂಲಕ ಬಗೆಹರಿಸಿಕೊಳ್ಳುವಂತೆ ಸಲಹೆ ನೀಡಲಾಗುತ್ತಿದೆ.

೫. ಪೊಲೀಸ್ ಠಾಣೆಯ ಬಗ್ಗೆ ಜನರಲ್ಲಿ ನಂಬಿಕೆ ಇಲ್ಲ. ಬದಲಾಗಿ ಭಯದ ವಾತಾವರಣಸೃಷ್ಟಿಸಿ ಕೊಂಡಿದ್ದಾರೆ.

೬. ಈ ಕಾಯಿದೆಯ ಬಗ್ಗೆ ಪೊಲೀಸರಿಗೆ ಸರಿಯಾಗಿ ಮಾಹಿತಿ ಇಲ್ಲದಿರುವುದನ್ನು ಕಾಣಲಾಗಿದೆ.

೭. ಮಹಿಳೆಯರು ಕಾಯಿದೆಯ ಬಗ್ಗೆ ತಿಳಿದುಕೊಳ್ಳುವ ಮನಸ್ಸನ್ನು ಮಾಡುತ್ತಿಲ್ಲ. ಇದಕ್ಕೆ ಬದಲಾಗಿ ಕುಟುಂಬದಲ್ಲಿ ಮಹಿಳೆಯ ಮೇಲೆ ಹಿಂಸೆ ನಡೆದರೆ ಅವುಗಳಿಗೆ ಹೊಂದಿಕೊಂಡು ಹೋಗುವ ಮನೋಭಾವನೆಯನ್ನು ಬೆಳೆಸಿಕೊಂಡಿದ್ದಾರೆ.

೮. ಹಿಂಸೆಯಿಂದ ನರಳುತ್ತಿರುವ ಮಹಿಳೆಯರ ಸಂರಕ್ಷಣೆಗಾಗಿ ಸ್ಥಾಪಿತಗೊಂಡ ಕೌಟುಂಬಿಕ ಸಲಹಾ ಕೇಂದ್ರಗಳ ಬಗ್ಗೆ ಮಹಿಳೆಯರಿಗೆ ಅರಿವೇ ಇಲ್ಲ. ಏಕೆಂದರೆ ಈ ಕೌಟುಂಬಿಕ ಸಲಹಾ ಕೇಂದ್ರಗಳು ಜಿಲ್ಲಾ ಮಟ್ಟದಲ್ಲಿ ಅಥವಾ ತಾಲೂಕು ಮಟ್ಟದಲ್ಲಿ ಸ್ಥಾಪನೆಯಾಗಿರುತ್ತವೆ. ಹಾಗಾಗಿ ಗ್ರಾಮೀಣ ಮಟ್ಟದ ಜನರಿಗೆ ಇದರ ಅರಿವು ಇರುವುದಿಲ್ಲ.

೯. ಮಹಿಳಾ ಸಂಘಟನೆಗಳು ಈ ಕಾಯ್ದೆಯ ಕುರಿತಂತೆ ಯಾವುದೇ ರೀತಿಯ ಕಾರ್ಯಗಳನ್ನು ನಿರ್ವಹಿಸು ತ್ತಿಲ್ಲ.

೧೦. ವ್ಯವಸ್ಥೆಯಲ್ಲಿ ಇರುವಂತಹ ಧಾರ್ಮಿಕ ಮೌಲ್ಯಗಳು ಈ ಕಾಯಿದೆಗೆ ಹಲವಾರು ರೀತಿಯಲ್ಲಿ ಅಡತಡೆಗಳನ್ನು ಒಡ್ಡಿವೆ.

೧೧. ಮಹಿಳೆಯರು ಮೂಢನಂಬಿಕೆಗಳಿಗೆ ಸಿಲುಕಿ, ತಮಗೋಸ್ಕರ ಒಂದು ಕಾನೂನು ಇದೆ ಎಂಬುದನ್ನೇ ಮರೆತು ಹೋಗಿದ್ದಾರೆ.

೧೨. ಈ ಕಾಯಿದೆಯಲ್ಲಿ ತಿಳಿಸಿರುವಂತೆ ನೊಂದ ಮಹಿಳೆಗೆ ಸಿಗಬೇಕಾದ ಎಲ್ಲಾ ಸೌಲಭ್ಯಗಳು ದೊರೆಯು ತ್ತಿಲ್ಲ.

೧೩. ಈ ಕಾಯಿದೆಯು ವಿವಾಹದ ನಂತರದಲ್ಲಿ ಅನುಭವಿಸುವ ಹಿಂಸೆಗೆ ಅತೀ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಟ್ಟಿದೆ. ಆದರೆ ವಿವಾಹ ಪೂರ್ವದಲ್ಲಿನ ಹಿಂಸೆಗೆ ಸಂಬಂಧಿಸಿದಂತೆ ಹೇಳಿಲ್ಲ.

೧೪. ಈ ಕಾಯಿದೆಯಿಂದ ನ್ಯಾಯದೊರಕಿಸಿಕೊಂಡವರು ಬೆರಳೆಣಿಕೆಯಷ್ಟು ಜನ ಮಾತ್ರ. ಬದಲಾಗಿ ಈ ಕಾಯಿದೆ ಜಾರಿಯಲ್ಲಿದ್ದರೂ ಸಹ ಹಿಂಸೆಯನ್ನು ಅನುಭವಿಸುತ್ತಿರುವ ಮಹಿಳೆಯರ ಸಂಖ್ಯೆಯೇ ಜಾಸ್ತಿಯಾಗಿದೆ.

ಹೀಗೆ ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ಸಂರಕ್ಷಣಾ ಕಾಯಿದೆ ಜಾರಿಗೆ ಬಂದ ನಂತರ ಕ್ಷೇತ್ರಾಧ್ಯಯನ ಮೂಲಕ ಕಂಡುಕೊಂಡ ವಿಷಯಗಳಾಗಿವೆ.

**ಅಧ್ಯಯನದ ಸಲಹೆಗಳು**

೧. ಗ್ರಾಮೀಣ ಭಾಗದ ಜನರು ಹೆಚ್ಚು ಸಾಕ್ಷರರಾಗಲು ಕ್ರಮಗಳನ್ನು ಕೈಗೊಳ್ಳಬೇಕು.

೨. ಪೊಲೀಸ್ ಇಲಾಖೆಗೆ ಸಂಬಂಧಿಸಿದಂತೆ ಜನರಿಗೆ ಇರುವ ಭಯವನ್ನು ಹೋಗಲಾಡಿಸಲು ಈ ಇಲಾಖೆ ಕ್ರಮಗಳನ್ನು ಕೈಗೊಳ್ಳಬೇಕು.

೩. ಕೌಟುಂಬಿಕ ಸಲಹಾ ಕೇಂದ್ರಗಳನ್ನು ಗ್ರಾಮೀಣ ಮಟ್ಟದಲ್ಲಿ ಸ್ಥಾಪಿಸಬೇಕು.

೪. ಸರ್ಕಾರೇತರ ಸಂಘ ಸಂಸ್ಥೆಗಳು ಈ ಕಾಯಿದೆಯ ಕುರಿತಂತೆ ಜನರಲ್ಲಿ ಜಾಗೃತಿಯನ್ನು ಮೂಡಿಸುವ ಕಾರ್ಯದಲ್ಲಿ ತೊಡಗಬೇಕು.

೫. ಗ್ರಾಮೀಣ ಭಾಗದಲ್ಲಿ ಇರುವಂತಹ ಮಹಿಳಾ ಸ್ವಸಹಾಯ ಗುಂಪುಗಳಿಗೆ ತರಬೇತಿ ಶಿಬಿರಗಳನ್ನು ಏರ್ಪಡಿಸುವುದರ ಮೂಲಕ ಈ ಗುಂಪುಗಳು ತಾವು ಸಭೆಗೆ ಆಯ್ಕೆ ಮಾಡಿಕೊಂಡ ದಿನಗಳಲ್ಲಿ ಈ ಕಾಯಿದೆಯ ಬಗ್ಗೆ ಚರ್ಚಿಸಬೇಕು.

೬. ಮಹಿಳಾ ಸ್ವಸಹಾಯ ಗುಂಪುಗಳಲ್ಲಿ ಇರುವ ಸದಸ್ಯರು ಕೌಟುಂಬಿಕ ಹಿಂಸೆಯಿಂದ ನರಳುತ್ತಿದ್ದರೆ ಅವರಿಗೆ ಸೂಕ್ತವಾದ ಪರಿಹಾರವನ್ನು ಕೊಡಿಸುವ ಕಾರ್ಯಗಳನ್ನು ಮಾಡಬೇಕು.

೭. ಈ ಕಾಯಿದೆಯ ನಿರ್ವಹಣಾಗಾರರು ಸರಿಯಾದ ರೀತಿಯಲ್ಲಿ ಕಾರ್ಯನಿರ್ವಹಿಸುವಂತೆ ಮಾಡಬೇಕು.

೮. ವೈದ್ಯರುಗಳಿಗೆ, ವಕೀಲರಿಗೆ ಈ ಕಾಯಿದೆಯ ಬಗ್ಗೆ ಅರಿವು ಮೂಡಿಸುವುದರ ಸಲುವಾಗಿ ಜಾಗೃತಿ ಶಿಬಿರಗಳನ್ನು ಸರಕಾರವು ಏರ್ಪಡಿಸಬೇಕು.

೯. ಮೂಢನಂಬಿಕೆಗಳಿಂದ, ಮಹಿಳೆಯರ ಹೊರಬರುವಂತೆ ಕಾರ್ಯಗಳನ್ನು ಕೈಗೊಳ್ಳಬೇಕು.

೧೦. ಕ್ಷೇತ್ರಾಧ್ಯಯನದ ಸಂದರ್ಭದಲ್ಲಿ ಹೆಚ್ಚಾಗಿ ಕುಡುಕ ಗಂಡನಿಂದ ಮಹಿಳೆ ಹಿಂಸೆಯನ್ನು ಅನುಭವಿಸುತ್ತಿರುವುದು ಕಂಡುಬರುವುದರಿಂದ ಮದ್ಯಪಾನ ನಿಷೇಧಿಸಬೇಕು. ಅಥವಾ ಈ ಮದ್ಯಪಾನ ನಿಷೇಧಕ್ಕೆ ಸಂಬಂಧಿಸಿದಂತೆ ಪ್ರತ್ಯೇಕವಾದ ಕಾನೂನನ್ನು ಜಾರಿಗೆ ತರಬೇಕು.

೧೧. ಕುಟುಂಬದಲ್ಲಿನ ಹಿಂಸೆಯಿಂದ ಬಳಲುತ್ತಿರುವ ಮಹಿಳೆಯರಿಗಾಗಿ ಗ್ರಾಮಮಟ್ಟದಲ್ಲಿ ಆಪ್ತ ಸಮಾಲೋಚನಾ ಕೇಂದ್ರಗಳನ್ನು ಸ್ಥಾಪಿಸಬೇಕು.

೧೨. ಗ್ರಾಮೀಣ ಪ್ರದೇಶಗಳಲ್ಲಿನ ಜನರು ಹೆಚ್ಚು ಬಡತನ ಮತ್ತು ನಿರುದ್ಯೋಗ ಸಮಸ್ಯೆಗಳಲ್ಲಿ ತೊಲಲಾಡುತ್ತಿರುವುದರಿಂದ ಇವುಗಳನ್ನು ಹೋಗಲಾಡಿಸಲು ಸರಕಾರ ಸೂಕ್ತ ಕ್ರಮಗಳನ್ನು ಕೈಗೊಳ್ಳಬೇಕು. ಇದರಿಂದ ಸ್ವಲ್ಪಮಟ್ಟಿಗಾದರೂ ಮಹಿಳೆಯರ ಮೇಲಿನ ಹಿಂಸೆ ಕಡಿಮೆಯಾಗುತ್ತದೆ.

೧೩. ಸ್ಥಳೀಯ ಮಹಿಳಾ ಸಂಘಟನೆಗಳು ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ಸಂರಕ್ಷಣಾ ಕಾಯಿದೆ ಸಮರ್ಥವಾಗಿ ಜಾರಿಗೆ ಬರಲು ಮತ್ತು ಮಹಿಳೆಯರು ಈ ಕಾಯಿದೆಯ ಬಗ್ಗೆ ಅರಿವನ್ನು ಹೊಂದುವ ಕಾರ್ಯದಲ್ಲಿ ತೊಡಬೇಕು.

೧೪. ವಿಶ್ವವಿದ್ಯಾಲಯಗಳು ಸುತ್ತ ಮುತ್ತಲಿನ ಗ್ರಾಮಗಳಲ್ಲಿನ ಜನತೆಗೆ ಈ ಕಾಯಿದೆಗೆ ಸಂಬಂಧಿಸಿದ ಜಾಗೃತಿ ಶಿಬಿರಗಳನ್ನು ಹಮ್ಮಿಕೊಳ್ಳಬೇಕು, ಕರಪತ್ರಗಳನ್ನು ತಯಾರಿಸಿ ಹಂಚುವ ಕಾರ್ಯದಲ್ಲಿ ತೊಡಗಬೇಕು.

೧೫. ಪೋಲೀಸ್ ಇಲಾಖೆಗಳೂ ಕೂಡ ಈ ಕಾಯಿದೆಯ ಬಗ್ಗೆ ಸಂಪೂರ್ಣವಾದ ಅರಿವನ್ನು ಹೊಂದಿರಬೇಕು.

೧೬. ವ್ಯವಸ್ಥೆಯಲ್ಲಿ ಇರುವಂತಹ ಲಿಂಗ ಅಸಮಾನತೆಯನ್ನು ತೊಡೆದು ಹಾಕುವ ನಿಟ್ಟಿನಲ್ಲಿ ಸರಕಾರವು ಕ್ರಮಗಳನ್ನು ಕೈಗೊಳ್ಳಬೇಕು. ಮುಖ್ಯವಾಗಿ ಪ್ರಾಥಮಿಕ ಹಂತದ ಶಾಲೆಗಳಲ್ಲಿನ ಪಠ್ಯಪುಸ್ತಕಗಳಲ್ಲಿ ಲಿಂಗ ಸಮಾನತೆಯ ಅಂಶಗಳು ಒಳಗೊಳ್ಳುವಂತೆ ಮಾಡಬೇಕು.

ನಾನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ವಿಷಯವು ವಿಶಾಲ ಹರಿವಿನದ್ದಾದ್ದರಿಂದ ನನ್ನ ವ್ಯಾಪ್ತಿ ಮತ್ತು ಕಾಲಾವಧಿಗನುಗುಣವಾಗಿ ನನ್ನ ಪ್ರಬಂಧವನ್ನು ಮಂಡಿಸಿದ್ದೇನೆ. ಈ ವಿಷಯ ಹಲವು ಆಯಾಮಗಳಲ್ಲಿ ಅಧ್ಯಯನ ಸಾಧ್ಯವಿರುವುದರಿಂದ ಅಧ್ಯಯನವನ್ನು ಆಸಕ್ತಿಗೆ ಅನುಗುಣವಾಗಿ ಮುಂದುವರೆಸಬಹುದು.

## ೧. ಪರಾಮರ್ಶನ ಗ್ರಂಥಗಳು


೧. ವಿಜಯಶ್ರೀ ಸಬರದ ಸಂ, ೨೦೦೫, ಮಹಿಳೆ, ಶೋಷಣೆ ಸವಾಲುಗಳು, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾನಿಲಯ, ಗುಲ್ಬರ್ಗಾ.

೨. ಉಷಾ ಎಂ., ೨೦೦೪, ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಗೀತಾಕೃಷ್ಣಮೂರ್ತಿ, ೨೦೦೭, ಮಹಿಳೆ, ಸಮಾಜ, ಕಾನೂನು, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೪. ಗಾಯಿತ್ರಿ ಎನ್, ೧೯೯೧, ಮಹಿಳೆ ಬಿಡುಗಡೆಯ ಹಾದಿಯಲ್ಲಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೫. ಗೀತಾ ಕೆ.ಎಸ್, ೨೦೦೮, ಮಹಿಳಾ ಹಕ್ಕುಗಳು ಮಾನವ ಹಕ್ಕುಗಳ ನೆಲೆಯಲ್ಲಿ, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬. ಗೀತಾ ಕೃಷ್ಣಮೂರ್ತಿ, ೨೦೦೯, ಮಹಿಳಾ ಹಕ್ಕುಗಳು ಮಾನವ ಹಕ್ಕುಗಳ ನೆಲೆಯಲ್ಲಿ ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭. ವಿಠ್ಠಲರಾವ್ ಟಿ.ಗಾಯಕ್ವಾಡ್, ೨೦೦೯, ಭಾರತೀಯ ಸ್ತ್ರೀ ಜೀವನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮. ಗೋಪಾಲರಾವ್ ವೈ.ಎಲ್, ೨೦೦೦, ಭಾರತೀಯ ನಾರಿ ಅಂದು ಇಂದು, ಬೈರವ ಪ್ರಕಾಶನ, ಚಿಕ್ಕಮಗಳೂರು.

೯. ಚಂದ್ರಶೇಖರ್, ಸಿ.ಆರ್. ೨೦೦೪, ನೀವು ಯಶಸ್ವಿ ಗೃಹಣಿಯೆ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೦. ನೀಲಮ್ಮ ಕತ್ನಳ್ಳಿ, ೧೯೯೭, ಮಹಿಳೆ ಹಲವು ಮುಖಗಳು, ಶ್ರೀ ರೇಣುಕಾ ಪ್ರಕಾಶನ, ಗುಲಬರ್ಗಾ.

೧೧. ಪ್ರೀತಿಶುಭಚಂದ್ರ, ೨೦೦೨, ಮಹಿಳಾ ಅಧ್ಯಯನ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೨. ಪ್ರೇಮಾ ಸಿರ್ಸಿ, ೨೦೦೬, ಮಹಿಳೆ ಸಮಾಜ ಮತ್ತು ಸವಾಲುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೩. ನಾರಾಯಣ ಎಂ, ೨೦೦೪, ಸಾಮಾಜಿಕ ಸಂಸ್ಥೆಗಳು ಮತ್ತು ಸಾಮಾಜಿಕ ಬದಲಾವಣೆ, ಲಕ್ಷ್ಮೀ ಪ್ರಿಂಟರ್ಸ್ ಮತ್ತು ಪಬ್ಲಿಕೇಷನ್ಸ್, ಮೈಸೂರು.

೧೪. ಮುಲಗುಂದ, ಚ.ವಿ, ೧೯೮೬, ಆಧುನಿಕ ಮಹಿಳೆ ಮತ್ತು ಸಮಾಜ, ಮಾತೃಶ್ರೀ ಪ್ರಕಾಶನ, ಮುದ್ದೆಬಿಹಾಳ್.

೧೫. ರಾಜಶೇಖರ್ ಎನ್, ೨೦೦೧, ಭಾರತೀಯ ಸಮಾಜ, ಭ್ರಮರ ಪ್ರಕಾಶನ, ಶಿವಮೊಗ್ಗ.

೧೬. ರೋಹಿಣಿ, ಬಿ.ಎಂ, ೨೦೦೪-೦೫, ಸ್ತ್ರೀ ಭಿನ್ನಮುಖಗಳು, ಕರಾವಳಿ ಲೇಖಕಿಯರ ವಾಚಕಿಯರ ಸಂಘ (ರಿ), ಮಂಗಳೂರು.

೧೭. ರೋಹಿಣಿ, ಬಿ.ಎಂ, ೧೯೯೫, ಸ್ತ್ರೀ ಸಂವೇದನೆ, ಹೇಮಾಂಶು ಪ್ರಕಾಶನ, ಮಂಗಳೂರು.

೧೮. ಶ್ರೀಮತಿ, ಎಚ್.ಎಸ್(ಅನು), ಸಿಮೋನ್ ದ ಬೋವಾ (ಮೂಲ), ೨೦೦೭, ದ ಸೆಕೆಂಡ್ ಸೆಕ್ಸ್, ಅಧ್ಯಯನ ಮಂಡಲ, ಬೆಂಗಳೂರು.

೧೯. ಶೈಲಜ ಇಂ.ಹಿರೇಮಠ, ೧೯೯೯, ಪಾತರದವರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೦. ಶೈಲಜ ಇಂ.ಹಿರೇಮಠ (ಸಂ), ೨೦೦೯, ಮಹಿಳಾ ಅಧ್ಯಯನ, ಸಂಪುಟ ೮, ಸಂಚಿಕೆ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೧. ಮೋಹನ್‌ಕೃಷ್ಣ ರೈ ಕೆ, ೨೦೦೪, ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೨. ಶಾಲಿನಿ ರಘುನಾಥ, ೧೯೯೪, ಸಮನ್ವಿತ, ಅಕ್ಷರ ಪ್ರಕಾಶನ, ಬಳ್ಳಾರಿ.

೨೩. ಶೈಲಜಾ ಇಂ.ಹಿರೇಮಠ (ಸಂ), ೨೦೦೭, ಮಹಿಳಾ ಅಧ್ಯಯನ, ಸಂಪುಟ ೯, ಸಂಚಿಕೆ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೪. ಶೈಲಜಾ ಇಂ.ಹಿರೇಮಠ (ಸಂ), ೨೦೦೭, ಮಹಿಳಾ ಅಧ್ಯಯನ, ಸಂಪುಟ ೯, ಸಂಚಿಕೆ ೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೫. ಇಂದು ಸುಬ್ರಹ್ಮಣ್ಯಂ ಹಾಗೂ ಉಷಾ ಬಿ.ಎನ್, ೨೦೧೦, ಕರ್ನಾಟಕದಲ್ಲಿ ಹಿಂಸೆಗೊಳಗಾದ ಮಹಿಳೆಯರಿಗಾಗಿ ಸರ್ಕಾರಿ ಸೇವೆಗಳು: ಒಂದು ಅಧ್ಯಯನ, ಹೆಂಗಸರ ಹಕ್ಕಿನ ಸಂಘ, ಬೆಂಗಳೂರು.

೨೬. ಸುಜ್ಞಾನಮೂರ್ತಿ ಬಿ.(ಅನು), ೨೦೦೯, ನಮಗೆ ಗೋಡೆಗಳಿಲ್ಲ, ಸ್ತ್ರೀವಾದಿ ಪರಿಚಯ, ಲಡಾಯಿ ಪ್ರಕಾಶನ, ಗದಗ.

೨೭. ಗಾಯಿತ್ರಿ ಎನ್, ೧೯೯೮, ಮಹಿಳಾ ಚಳುವಳಿಯ ಮಜಲುಗಳು,ನವಕರ್ನಾಟಕ ಪ್ರಕಾಶನ, ಬೆಂಗಳೂರು.

೨೮. ಮಂಜುನಾಥ ಅದ್ದೆ, ೨೦೦೮, ಒಡಲ ತುಡಿತಕ್ಕೆ ಕೇಡು, ಸ್ತ್ರೀ ಲೇಖ ಪ್ರಕಟಣೆ, ಬೆಂಗಳೂರು.

೨೯. ಶ್ರೀಮತಿ ಎಚ್.ಎಸ್, ೧೯೯೯, ಮಹಿಳಾ ಅಧ್ಯಯನ ಸಂಚಿಕೆ, (ದಕ್ಷಿಣಾಯನ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೦. ಶ್ರೀಮತಿ ಎಚ್.ಎಸ್, ೨೦೦೦, ಮಹಿಳಾ ಅಧ್ಯಯನ ಸಂಚಿಕೆ, (ದಕ್ಷಿಣಾಯನ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೧. ಶ್ರೀಮತಿ ಎಚ್.ಎಸ್, ೨೦೦೧, ಮಹಿಳಾ ಅಧ್ಯಯನ ಸಂಚಿಕೆ, (ದಕ್ಷಿಣಾಯನ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೨. ಇಂದಿರಾ ಜೈಪ್ರಕಾಶ್, ೨೦೦೯, ಸ್ತ್ರೀವಾದಿ ಮನೋವಿಜ್ಞಾನ, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

## ನಿಯತಕಾಲಿಕೆಗಳು

೧. ವಿಜಯಕರ್ನಾಟಕ, ೧೩ಮಾರ್ಚ್, ೨೦೦೭, ಮಹಿಳಾ ಆಯೋಗ ಪಡೆದುಕೊಳ್ಳಿ ಉಪಯೋಗ.

೨. ಸಂಯುಕ್ತ ಕರ್ನಾಟಕ, ೮ ಜನವರಿ, ೨೦೦೭, ಮಹಿಳೆ ಮತ್ತು ಮಾನವ ಹಕ್ಕುಗಳು.

೩. ವಿಜಯ ಕರ್ನಾಟಕ, ೩೧ ಜುಲೈ, ೨೦೦೭, ತೂಗೀತೆ ಸರ್ಕಾರದ ತೊಟ್ಟಿಲು?

೪. ವಿಜಯ ಕರ್ನಾಟಕ, ೧೭ ಏಪ್ರಿಲ್, ೨೦೦೭, ಬಾಡಿಗೆ ತಾಯಿ ಬೇಕೆ?

೫. ವಿಜಯ ಕರ್ನಾಟಕ, ೧೨ಜೂನ್, ೨೦೦೭, ಸಂತಾನ ಇಲ್ಲದವರೆಲ್ಲ ಬಂಜೆಯರಲ್ಲ.

೬. ವಿಜಯಕರ್ನಾಟಕ, ೧೧ಸೆಪ್ಟೆಂಬರ್, ೨೦೦೭, ಇದು ಮಹಿಳೆ ಎಚ್ಚೆತ್ತುಕೊಳ್ಳಬೇಕೆಂಬ ಅರಿವೋ, ಅನಿವಾರ್ಯವೋ?

೭. ಪ್ರಜಾವಾಣಿ, ೨೩ಸೆಪ್ಟೆಂಬರ್, ೨೦೦೬. ಸಾಂಗತ್ಯಕ್ಕೆ ಅಡ್ಡಿಯಾಗದ ಹಿರಿತನ.

೮. ಪ್ರಜಾವಾಣಿ, ೭ನೇ ಜುಲೈ, ೨೦೧೦, ಗೊಡ್ಡು ಸಂಪ್ರದಾಯಕ್ಕೆ ಯುವ ಜನರ ವಿರೋಧ.

## ೨. ವಕ್ತೃ ವಿವರ

| ಕ್ರ.ಸಂ. | ಹೆಸರು | ವಯಸ್ಸು | ಜಾತಿ | ವಿದ್ಯಾರ್ಹತೆ | ವಾರ್ಡ್‌ಸಂಖ್ಯೆ/ಹೆಸರು |
|---|---|---|---|---|---|
| ೦೧. | ದೇವೇಂದ್ರಮ್ಮ | ೨೫ | ನಾಯಕರು | ಅನಕ್ಷರಸ್ಥೆ | ೧ನೇ ವಾರ್ಡ್ |
| ೦೨. | ಮಾರೆಮ್ಮ | ೪೫ | ಒಡ್ಡರು | ಅನಕ್ಷರಸ್ಥೆ | ಕುಪ್ಪಯ್ಯನಕ್ಯಾಂಪ್ |
| ೦೩. | ಹಸೀನ | ೨೧ | ಮುಸ್ಲೀಂ | ಅನಕ್ಷರಸ್ಥೆ | ಕುಪ್ಪಯ್ಯನಕ್ಯಾಂಪ್ |
| ೦೪. | ಗಂಗಮ್ಮ | ೨೮ | ನಾಯಕರು | ಅನಕ್ಷರಸ್ಥೆ | ಮನ್ಮಥಕೇರಿ |
| ೦೫. | ಗೌರಮ್ಮ | ೨೩ | ನಾಯಕರು | ಅನಕ್ಷರಸ್ಥೆ | ಮನ್ಮಥಕೇರಿ |
| ೦೬. | ಅಲುವೇಲಮ್ಮ | ೩೬ | ಹರಿಜನ | ಅನಕ್ಷರಸ್ಥೆ | ಪಟ್ಟಾಭಿರಾಮಕ್ಯಾಂಪ್ |
| ೦೭. | ಜಯಲಕ್ಷ್ಮಿ | ೧೯ | ಬಡಿಗೇರು | ೩ನೇ ತರಗತಿ | ಪಟ್ಟಾಭಿರಾಮಕ್ಯಾಂಪ್ |
| ೦೮. | ರಾಜಮಣಿ | ೩೫ | ಬೋವಿ | ೫ನೇ ತರಗತಿ | ಪಟ್ಟಾಭಿರಾಮಕ್ಯಾಂಪ್ |
| ೦೯. | ತಿಪ್ಪಮ್ಮ | ೨೧ | ಭಜಂತ್ರಿ | ೫ನೇ ತರಗತಿ | ಕಮಲಾಪುರ |
| ೧೦. | ರಿಹಾನ | ೨೧ | ಮುಸ್ಲಿಂ | ಅನಕ್ಷರಸ್ಥೆ | ಕುಪ್ಪಯ್ಯನಕ್ಯಾಂಪ್ |
| ೧೧. | ಮಹಾದೇವಿ | ೨೫ | ಕುರುಬರು | ಅನಕ್ಷರಸ್ಥೆ | ಕುಪ್ಪಯ್ಯನಕ್ಯಾಂಪ್ |
| ೧೨. | ರೀಟಾ | ೩೦ | ಕ್ರಿಶ್ಚಿಯನ್ | ೮ನೇ ತರಗತಿ | ಕುಪ್ಪಯ್ಯನಕ್ಯಾಂಪ್ |
| ೧೩. | ಕಸ್ತೂರಿ | ೨೮ | ನಾಯಕರು | ಅನಕ್ಷರಸ್ಥೆ | ಬಂಡಿಕೇರಿ |
| ೧೪. | ಲಕ್ಷ್ಮೀಮಾರೆಮ್ಮ | ೨೦ | ನಾಯಕರು | ಅನಕ್ಷರಸ್ಥೆ | ಬಂಡಿಕೇರಿ |
| ೧೫. | ಗಿರಿಜಮ್ಮ | ೪೫ | ಮರಾಠಿ | ೩ನೇ ತರಗತಿ | ಬಂಡಿಕೇರಿ |
| ೧೬. | ಮಾರೆಮ್ಮ | ೪೦ | ನಾಯಕರು | ಅನಕ್ಷರಸ್ಥೆ | ಮನ್ಮಥಕೇರಿ |
| ೧೭. | ಗಂಗಮ್ಮ | ೫೦ | ನಾಯಕರು | ಅನಕ್ಷರಸ್ಥೆ | ಬಂಡಿಕೇರಿ |

| | | | | | |
|---|---|---|---|---|---|
| ೧೮. | ಓಬಮ್ಮ | ೨೫ | ನಾಯಕರು | ಅನಕ್ಷರಸ್ಥೆ | ಬಂಡಿಕೇರಿ |
| ೧೯. | ನೆರೆಗೆಲ್ಲಮ್ಮ | ೨೫ | ನಾಯಕರು | ಅನಕ್ಷರಸ್ಥೆ | ಕುಪ್ಪಯ್ಯನಕ್ಯಾಂಪ್ |
| ೨೦. | ಕಮಲಾ | ೧೮ | ನಾಯಕರು | ಅನಕ್ಷರಸ್ಥೆ | ಕುಪ್ಪಯ್ಯನಕ್ಯಾಂಪ್ |
| ೨೧. | ಭಾನು ಬಿ. | ೨೦ | ಮುಸ್ಲಿಂ | ೩ನೇ ತರಗತಿ | ಹಳ್ಳಿಕೇರಿ |
| ೨೨. | ಪ್ರೇಮ | ೨೫ | ಕುರುಬ | ಅನಕ್ಷರಸ್ಥೆ | ಹಳ್ಳಿಕೇರಿ |
| ೨೩. | ಮುಮ್‌ತಾಜ್ | ೪೫ | ಮುಸ್ಲಿಂ | ಅನಕ್ಷರಸ್ಥೆ | ಹಳ್ಳಿಕೇರಿ |
| ೨೪. | ಸುಮಾ | ೨೮ | ನಾಯಕರು | ಎಸ್‌ಎಸ್‌ಎಲ್‌ಸಿ | ಚೌಡಿಕೇರಿ |
| ೨೫. | ಸಂಡೂರು ಓಬಕ್ಕ | ೩೪ | ನಾಯಕರು | ಅನಕ್ಷರಸ್ಥೆ | ಚೌಡಿಕೇರಿ |
| ೨೬. | ಸುನಿತಾ | ೨೮ | ನಾಯಕರು | ೭ನೇ ತರಗತಿ | ಕಮಲಾಪುರ ಕೋಟೆ |
| ೨೭. | ರಾಜಾಭಿ | ೩೫ | ಮುಸ್ಲೀಂ | ಅನಕ್ಷರಸ್ಥೆ | ೪ನೇ ವಾರ್ಡ್ |
| ೨೮. | ಫಾತೀಮಾ | ೩೫ | ಮುಸ್ಲೀಂ | ಅನಕ್ಷರಸ್ಥೆ | ೧೩ನೇ ವಾರ್ಡ್ |
| ೨೯. | ಶ್ಯಾಮಲಮ್ಮ | ೪೫ | ಬಳಿಗೇರು | ಅನಕ್ಷರಸ್ಥೆ | ಪಟ್ಟಾಭಿರಾಮಕ್ಯಾಂಪ್ |
| ೩೦. | ಲಕ್ಷ್ಮೀ | ೨೪ | ವಡ್ಡರು | ಅನಕ್ಷರಸ್ಥೆ | ಪಟ್ಟಾಭಿರಾಮಕ್ಯಾಂಪ್ |
| ೩೧. | ಪೆದ್ದಮ್ಮ | ೪೫ | ಬೋವಿ | ಅನಕ್ಷರಸ್ಥೆ | ಪಟ್ಟಾಭಿರಾಮಕ್ಯಾಂಪ್ |
| ೩೨. | ಚಂದ್ರಿಕ | ೩೮ | ನಾಯುಡು | ಅನಕ್ಷರಸ್ಥೆ | ಪಟ್ಟಾಭಿರಾಮಕ್ಯಾಂಪ್ |
| ೩೩. | ರೇಣುಕಮ್ಮ | ೪೦ | ವಿಶ್ವಕರ್ಮ | ೭ನೇ ತರಗತಿ | ಪಟ್ಟಾಭಿರಾಮಕ್ಯಾಂಪ್ |
| ೩೪. | ಅಂತೇನಿಯಮ್ಮ | ೩೦ | ಆದಿದ್ರಾವಿಡ | ಅನಕ್ಷರಸ್ಥೆ | ಪಟ್ಟಾಭಿರಾಮಕ್ಯಾಂಪ್ |
| ೩೫. | ಮಾಬುನ್ನಿ | ೪೦ | ಮುಸ್ಲಿಂ | ಅನಕ್ಷರಸ್ಥೆ | ಕುಪ್ಪಯ್ಯಕ್ಯಾಂಪ್ |
| ೩೬. | ಸಂಜನಾ | ೨೬ | ಉತ್ತಾರ | ೭ನೇ ತರಗತಿ | ಹಳ್ಳಿಕೇರಿ |
| ೩೭. | ಕಾಳಮ್ಮ | ೨೮ | ಬಡಿಗೇರು | ಅನಕ್ಷರಸ್ಥೆ | ಹಳ್ಳಿಕೇರಿ |
| ೩೮. | ಲಕ್ಷ್ಮೀ | ೧೮ | ನಾಯಕರು | ೪ನೇ ತರಗತಿ | ಹಳ್ಳಿಕೇರಿ |
| ೩೯. | ಶಿಲ್ಪ | ೨೮ | ಹರಿಜನ | ಅನಕ್ಷರಸ್ಥೆ | ಕುಪ್ಪಯ್ಯನಕ್ಯಾಂಪ್ |
| ೪೦. | ಬಾಗೀರಥಿ | ೪೫ | ಚೆನ್ನದಾಸರು | ಅನಕ್ಷರಸ್ಥೆ | ಅಂಬೇಡ್ಕರ್‌ನಗರ |

